# ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳ ತೌಲನಿಕ ಅಧ್ಯಯನ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್ (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.


<u>ಸಂಶೋಧಕಿ</u>

ರಮ್ಯ

ನೋಂದಣಿ ಸಂಖ್ಯೆ:ಕೆಆರ್‌ಎಸ್‌ಎಂಕೆಎಸ್00452

<u>ಮಾರ್ಗದರ್ಶಕರು</u>

ಡಾ|| ಎ.ಆರ್.ಮದನ ಕುಮಾರ್, ಎಂ.ಎ.ಪಿಹೆಚ್‌ಡಿ.





ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ.ಹಂಪಿಯಿಂದ ಮಾನ್ಯತೆ ಪಡೆದಿದೆ)
ಮಂಡ್ಯ

# ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳ ತೌಲನಿಕ ಅಧ್ಯಯನ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್ (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.


**ಸಂಶೋಧಕ**

**ರಮ್ಯ**

**ನೋಂದಣಿ ಸಂಖ್ಯೆ:ಕೆಆರ್‌ಎಸ್‌ಎಂಕೆಎಸ್00452**

**ಮಾರ್ಗದರ್ಶಕರು**

**ಡಾ|| ಎ.ಆರ್.ಮದನ ಕುಮಾರ್,** ಎಂ.ಎ.ಪಿಹೆಚ್‌ಡಿ.





**ಕರ್ನಾಟಕ ಸಂಘ (ರಿ), ಮಂಡ್ಯ**

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಹಂಪಿಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

೨೦೦೯-೨೦೧೦

# ಪ್ರಮಾಣ ಪತ್ರ

"ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳ ತೌಲನಿಕ ಅಧ್ಯಯನ" ಎಂಬ ವಿಷಯದ ಮೇಲೆ ಈ ನಿಬಂಧವನ್ನು ಡಾ.ಎ.ಆರ್. ಮದನ ಕುಮಾರ್ ರವರ ಮಾರ್ಗದರ್ಶನದಲ್ಲಿ ನನ್ನ ಸಂಶೋಧನೆಯ ಫಲವಾಗಿ ರಚಿಸಲ್ಪಟ್ಟು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ (ಕನ್ನಡ) ಪದವಿಗೆ ಅರ್ಪಿಸುತ್ತಿದ್ದೇನೆ.

ಈ ನಿಬಂಧವನ್ನು ಹಿಂದಿನ ವರ್ಷಗಳಲ್ಲಿ ಯಾರೂ ಇಲ್ಲಿಯವರೆಗೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿಲ್ಲವೆಂದು ನಾನು ಇಲ್ಲಿ ಪ್ರಮಾಣೀಕರಿಸುತ್ತಿದ್ದೇನೆ.

Ramya.
ರಮ್ಯ
ಎಂ.ಫಿಲ್. ವಿದ್ಯಾರ್ಥಿ
ನೋಂದಣಿ ಸಂಖ್ಯೆ : ಕೆಆರ್ಎಸ್ಎಂಕೆಎಸ್00452

ದಿನಾಂಕ: 27–08–2010
ಸ್ಥಳ : ಮಂಡ್ಯ

## ದೃಢೀಕರಣ ಪತ್ರ

"ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳ ತೌಲನಿಕ ಅಧ್ಯಯನ" ಎಂಬ ವಿಷಯದ ಮೇಲೆ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್.(ಕನ್ನಡ) ಪದವಿಗೆ ವಿದ್ಯಾರ್ಥಿಯಾದ ರಮ್ಯ ಅವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆಂದೂ ಹಾಗೂ ಈ ವಿಷಯದ ಬಗ್ಗೆ ಬೇರೆ ಯಾರಿಗೂ ನಾನು ಮಾರ್ಗದರ್ಶನ ಮಾಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರ ಸಹಿ

(ಡಾ॥ ಎ.ಆರ್.ಮದನಕುಮಾರ್)
ಪ್ರಾಧ್ಯಾಪಕರು, ಕನ್ನಡ ವಿಭಾಗ
ಮಹಿಳಾ ಸರ್ಕಾರಿ ಪದವಿ ಕಾಲೇಜು, ಮಂಡ್ಯ

ದಿನಾಂಕ: 27–08–2010
ಸ್ಥಳ : ಮಂಡ್ಯ

# ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳ ತೌಲನಿಕ ಅಧ್ಯಯನ.



## ಪರಿವಿಡಿ

## ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯ ಇತಿಹಾಸದಲ್ಲಿಯೇ ಇಪ್ಪತ್ತನೆಯ ಶತಮಾನ ಅತ್ಯಂತ ವಿಶಿಷ್ಟವಾದುದು. ಸಾಹಿತ್ಯದ ಅನೇಕ ಪ್ರಕಾರಗಳು ಹೊಸದಾಗಿ ರೂಪಗೊಂಡು ಬಹುಬೇಗ ಪ್ರಬುಧತೆ ಗಳಿಸಿದ ಕಾಲ ಇದು. ಇಂಗ್ಲೀಷ್ ಸಾಹಿತ್ಯ ಸಂಸ್ಕೃತಿಗಳ ಪ್ರಭಾವಗಳನ್ನು ಅರಗಿಸಿಕೊಂಡು ತನ್ನ ದೇಶೀಮೂಲಗಳನ್ನು ಮತ್ತೆ ಮತ್ತೆ ಹುಡುಕಿಕೊಳ್ಳುತ್ತಾ ಹೊಸದೊಂದು ಅನುಸಂಧಾನವನ್ನು ನಡೆಸಿದ ಕಾಲ ಇದು. ಈ ಸಂಸ್ಕೃತಿಗಳ ಸಂಘರ್ಷವನ್ನು ಒಂದು ಸವಾಲಾಗಿ ಸ್ವೀಕರಿಸಿ ಒಪ್ಪಿಕೊಂಡಿದೆ. ಪ್ರಭಾವಗಳನ್ನು ಸ್ವೀಕರಿಸಿಯೂ ತನ್ನ ತನವನ್ನು ಉಳಿಸಿಕೊಳ್ಳಲು ಹೋರಾಟ ನಡೆಸಿದೆ.

ನವೋದಯ ಸಾಹಿತ್ಯ ಪ್ರಕರದಲ್ಲಿ ಹಲವು ಪ್ರಕಾರಗಳು ಮೂಡಿ ಬಂದವು. ಕಾವ್ಯ, ನಾಟಕ, ಕಾದಂಬರಿ, ಭಾವಗೀತೆಗಳು, ಸಣ್ಣಕತೆ, ವಿಮರ್ಶೆ ಮತ್ತು ಸಂಶೋಧನೆಗೆ ಹೀಗೆ ಹಲವು ಪ್ರಕಾರಗಳ ಜೊತೆಯಲ್ಲಿ ಪ್ರಬಂಧ ಸಾಹಿತ್ಯದ ಪ್ರಕಾರ ಮೂಡಿ ಬಂದಿದೆ. ಕಾವ್ಯ ಪ್ರಕಾರವು ತನ್ನದೇ ಒಂದು ದೀರ್ಘವಾದ ಇತಿಹಾಸವನ್ನು ಹೊಂದಿದೆ. ಕಾವ್ಯಕ್ಕೆ ಒಂದು ವಸ್ತುವನ್ನು ಆಯ್ಕೆ ಮಾಡಿಕೊಳ್ಳಬೇಕಾದರೆ ಅದು ಪೌರಾಣಿಕ ಕಥೆಯನೇ ಹೊಂದಿರಬೇಕಾಗಿತ್ತು. ನಾಟಕ ಪ್ರಕಾರಕ್ಕೂ ಒಂದು ಚೌಕಟ್ಟು ನಿರ್ಮಾಣವಾಯಿತು. ಕಾದಂಬರಿಗಳಲ್ಲಿ ಹೆಚ್ಚು ಕಲ್ಪನೆಗೆ ಸೇರಿದ ವಸ್ತುವನ್ನು ಆಯ್ಕೆ ಮಾಡುತ್ತಿದ್ದರು. ಆದರೆ ಲಲಿತ ಪ್ರಬಂಧಗಳು ಇದಕ್ಕೆ ಹೊರತಾಗಿದೆ.

ಕಾಲಕ್ರಮೇಣದಲ್ಲಿ ರಚನೆಯಾದ ಪ್ರಬಂಧಗಳಲ್ಲಿ ಸಮಕಾಲೀನ ಸಮಸ್ಯೆಗಳು ಗಂಭೀರವಾದ ಚಿಂತನೆ ಸ್ವರೂಪವನ್ನು ಪಡೆಯಲಾರಂಭಿಸಿದವು. ಅವರ ಮನವನ್ನು ಸೆಳೆಯಲು ವಿಚಾರ ಕ್ರಾಂತಿಯನ್ನುಂಟು ಮಾಡಲು ಪ್ರಬಂಧಗಳು ರಚನೆಯಾದವು. ಪ್ರಬಂಧಗಳು ಗಂಭೀರ ವಸ್ತುವನ್ನು ಒಳಗೊಂಡು ಚಿಂತನೆಗೆ ಪ್ರಚೋದನೆ ನೀಡುವ ಮಾದರಿಯವು. ಇವನ್ನು ಓದಿ ಮುಗಿಸುತ್ತಿದ್ದಂತೆಯೇ ಸಮಕಾಲೀನ ಸಮಸ್ಯೆಯೊಂದರ ಭೂತ ನಮ್ಮೆದುರು ಭೀಕರ ಸ್ವರೂಪವನ್ನು ತಾಳಿ ನಿಲ್ಲುತ್ತದೆ. ವರ್ತಮಾನದ ಯಾವುದೋ ಒಂದು ವಾಸ್ತವಿಕ ಸಮಸ್ಯೆ ಭೀಕರ ಸ್ವರೂಪ ಭವಿಷ್ಯದ ಕಲ್ಪನೆಯನ್ನು ನಮ್ಮಲ್ಲಿ ಮೂಡಿಸುತ್ತದೆ.

ವೈವಿಧ್ಯಮಯವಾದ ವಸ್ತುವನ್ನು ಒಳಗೊಂಡಿರುವ ಲಲಿತ ಪ್ರಬಂಧಗಳು ಸಾಹಿತ್ಯ ಆಸಕ್ತಿಕರ ಗಮನ ಸೆಳೆದ ಪ್ರಕಾರವಾಗಿದೆ. ಶತಮಾನಗಳಿಂದ ನಿರ್ಲಕ್ಷಗೊಳಗಾದ ಮತ್ತು ಅಭಿವೃದ್ಧಿಯ ಪಥದಿಂದ ವಂಚಿತವಾಗಿ ಉಳಿದವರು ನಮ್ಮ ನಾಡಿನಲ್ಲಿಯೇ ಪರಕೀಯ ನೋವನ್ನು ಹೊತ್ತು ಬಂದಿರುವ ಜನ ಸಮೂಹವನ್ನು ಕಾಣಬಹುದು. ಅನಕ್ಷರತೆ, ಬಡತನ, ಪಾರಂಪರಿಕ ಚಳುವಳಿಗಳು ದೇಶೀಯ ಹೋರಾಟಗಳು, ಜಮೀನ್ದಾರಿ ಪದ್ದತಿ, ಜಾತಿ ಹೆಸರಿನ ದುರ್ಬಳಕೆ, ಕಂದಾಚಾರಗಳು, ಇಂದಿಗೂ ಜೀವಂತವಾಗಿದೆ. ಈ ಪಿಡುಗುಗಳನ್ನು ಅವರು ಪರಿಣಾಮಗಳನ್ನು ಅತ್ಯಂತ ಸೂಕ್ಷ್ಮ ಮತ್ತು ಕಲಾತ್ಮಕತೆಯಿಂದ ಹಾಗೂ ಹಾಸ್ಯ, ವಿಡಂಬನೆಯ ಮೂಲಕ ಲಲಿತ ಪ್ರಬಂಧಗಳಲ್ಲಿ ಹಿಡಿದಿಟ್ಟಿರುವ ಅನೇಕ ಉತ್ತಮ ಪ್ರಬಂಧಗಳು ನಮಗೆ ದೊರೆಯುತ್ತವೆ. ಕನ್ನಡ ಪ್ರಬಂಧ ಸಾಹಿತ್ಯದ ಇತಿಹಾಸಕಾರರು ಮರೆಯಲಾಗದ ಪ್ರಬಂಧಕಾರರು ಕನ್ನಡ ಸಾಹಿತ್ಯಾ ಲೋಕದಲ್ಲಿ ಇದ್ದರೆ ಅತ್ಯತ್ತಮ ಪ್ರಂಬಧಗಳು ಸರಸ ವಿನೋದಗಳಿಂದ ಪ್ರಸಿದ್ದವಾಗಿದೆ ರಾಶಿ, ವಿಸೀ, ಗೊರೂರು, ಎ.ಎನ್.ಮೂರ್ತಿರಾವ್, ಕುವೆಂಪು, ಮಾಸ್ತಿ, ಮುಂತಾದ ಪ್ರಂಬಧ ಸಾಹಿತ್ಯಕೆ ಹೆಚ್ಚು ಪ್ರಬದ್ದತೆಯನ್ನು ತಂದುಕೂಡುತ್ತದೆ,

ರಾಶಿ ಕೊರವಂಜ್ಜಿಯ ರಾಶೀ ಒಬ್ಬ ಹರಟೆಗಾರರು, ಅವರ 'ತುಟಿಮೀರಿದವರು' ತುಂಬಾ ಪ್ರಸಿದ್ದವಾದ ಹರಟೆಗಳ ಸಂಗ್ರಹ, ಕಣ್ಣಿಗೆ ಕಂಡ ವಸ್ತುವನ್ನು ಹಾಸ್ಯಮಾಡಿ ಗುರುತಿಸುವ ಮನೋಧರ್ಮ ಅವರದು.

ವಿ.ಸೀತಾರಾಮಯ್ಯ ಅವರ 'ಪಂಪಯಾತ್ರೆ' ಇಂದಿಗೂ ತನ್ನ ತಾಜಾತನದಿಂದ ಕಣ್ಸೆಳೆಯುವ ಪ್ರವಾಸ ಕಥನ. ಗತಕಾಲದ ವೈಭವವನ್ನು ನಮ್ಮ ಕಣ್ಮುಂದೆ ತಂದು ಎಚ್ಚರಿಸುವ ಕೃತಿ ಅವರದೇ ಆದ ಮಹತ್ವಡೆದುಕೊಂಡಿದೆ.

ಕುವೆಂಪು ಮತ್ತು ಪು.ತಿ.ನ ಇವರಿಬ್ಬರೂ ನವೋದಯ ತಲೆಮಾರಿನ ಮಹತ್ವದ ಕವಿಗಳು, ಇವರಿಬ್ಬರ ಜೊತೆಗೆ ಬೇಂದ್ರೆಯವರನ್ನು ಪರಿಗಣಿಸಿದಾಗ ನವೋದಯದ ರತ್ನತ್ರಯರಾಗುತ್ತಾರೆ. ಬೇಂದ್ರೆಯವರು ಹರಟೆ ಬರೆದರು. ಕುವೆಂಪು ನಿಸರ್ಗಪ್ರೀತಿ ಕಾವ್ಯದಲ್ಲಿಯಂತೆ ಮಲೆನಾಡಿನ ಚಿತ್ರಗಳಲ್ಲಿಯೂ ಕಾಣಿಸಿಕೊಂಡಿತು. ಪು.ತಿ.ನ. ದೇವರ ಶ್ರದ್ದೆ, ಪುರಾಣಪ್ರಿಯತೆ ಇನ್ನೊಂದು ನಿಟ್ಟಿನಿಂದ ತಿಳಿಯಾಗಿ ಪ್ರಬಂಧದಲ್ಲಿ ವ್ಯಕ್ತವಾಯಿತು.

ಪ್ರಬಂಧಕಾರರಲ್ಲಿ ಅತ್ಯಂತ ಜನಪ್ರಿಯತೆ ಪಡೆದುಕೊಂಡವರು ಎಂದರೆ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕನ್ನಡ ಸಾಹಿತ್ಯದಲ್ಲಿ ಗೊರೂರು ಅವರದು ವಿಶಿಷ್ಟವಾದ ಸಾಧನೆ, ರಾಷ್ಟ್ರೀಯ ಕಾರ್ಯದಲ್ಲಿ ತೊಡಗಿಕೊಂಡಿದ್ದರೂ ಹಳ್ಳಿಯ ಬದುಕನ್ನು ನೆಚ್ಚಿಕೊಂಡವರು. ಅಮೇರಿಕಾವನ್ನು

ಕಂಡವರಾದರೂ ಗೊರೂರು ಭಾರತೀಯ ಸೊಗಡನ್ನು ಕಿಂಚಿತ್ತು ಮರೆಯದವರು. 'ಹಳ್ಳಿಯ ಚಿತ್ರಗಳು' 'ನಮ್ಮೂರಿನ ರಸಿಕರು' 'ಗರುಡ ಗಂಭದ ದಾಸಯ್ಯ' 'ಬೆಸ್ತರ ಕರಿಯ' ಇವೇ ಮೊದಲಾದ ಪ್ರಬಂಧ ಗಳಲ್ಲಿ ಹಳ್ಳಿಯ ವಸ್ತುಗಳು ಮತ್ತು ಚಿತ್ರಗಳು ನಮ್ಮ ಕಣ್ಣ ಮುಂದೆ ಬರುತ್ತವೆ.

ಎ.ಎನ್ ಮೂರ್ತಿರಾವ್ ಕನ್ನಡದಲ್ಲಿ 'ಲಲಿತ ಪ್ರಬಂಧ' ಪ್ರಕಾರಕ್ಕೆ ನಿಜವಾದ ಘನತೆಯನ್ನು ತಂದುಕೊಟ್ಟವರು, ಎ.ಎನ್ ಮೂರ್ತಿರಾವ್ ಅವರ 'ಹಗಲುಗನಸುಗಳು' ಪ್ರಕಟವಾದಾಗ ಕನ್ನಡ ರಸಿಕರಿಗೆ ಹೊಸ ಲೋಕವನ್ನು ಕಂಡಂತಹ ಅನುಭವ 'ಹೂವುಗಳು' ,'ಗಾಡಿಯ ಪ್ರಯಾಣ' ಇವುಗಳಲ್ಲಿ ರಮ್ಯವಾದ ವರ್ಣನೆಯಿಂದ ಕೂಡಿದ ಬರವಣಿಗೆ ಕಂಡು ಬರುತ್ತದೆ.

ನವೋದಯ ಕಾಲ ಘಟ್ಟದಲ್ಲಿ ಗೊರೂರು ಮತ್ತು ಎ.ಎನ್. ಮೂರ್ತಿರಾವ್ ಪ್ರಬಂಧಗಳು ಕಡಿಮೆ ಸಂಖ್ಯೆಯಲ್ಲಿದ್ದರೂ ಅವುಗಳ ವಸ್ತು ವೈವಿಧ್ಯತೆಯಿಂದಾಗಿ ಪ್ರಾಮುಖ್ಯತೆ ಪಡೆದವು. ಹಾಗಾಗಿ ನಾನು ಈ ಇಬ್ಬರು ಪ್ರಬಂಧಕಾರರ ಪ್ರಬಂಧಗಳನ್ನು ಅಧ್ಯಯನಕ್ಕೆ ಆರಿಸಿಕೊಡಿದ್ದೇನೆ ಅವರ ಪ್ರಬಂಧಗಳಲ್ಲಿ ಕಂಡು ಬರುವ ವಸ್ತು ವೈವಿಧ್ಯತೆ ಹಾಗೂ ಭಿನ್ನತೆಗಳನ್ನು ಗುರುತಿಸಿ ಮೌಲ್ಯ ಕಟ್ಟುವ ಕಾರ್ಯವನ್ನು ಈ ನಿಬಂಧವು ಒಳಗೊಂಡಿದೆ. ಅಂದರೆ ಪ್ರಬಂಧಕಾರರಾಗ ಗೊರೂರರು ಮತ್ತು ಎ.ಎನ್.ಮೂರ್ತಿರಾವ್ ಅವರ ಲಲಿತ ಪ್ರಬಂಧಗಳನ್ನು ತುಲನಾತ್ಮಕ ಅಧ್ಯಯನಕ್ಕೆ ಒಳಪಡಿಸುವುದಾಗಿದೆ. ಈ ಅಧ್ಯಯನಕ್ಕೆ ಗೊರೂರರು ಮತ್ತು ಮೂರ್ತಿರಾವ್ ಅವರ ಒಟ್ಟು ಪ್ರಬಂಧಸಂಕಲನಗಳನ್ನು ಒಳಪಡಿಸಿಕೊಂಡಿರುತ್ತೇನೆ. ಅಂದರೆ ಗೊರೂರರ 'ಹೇಮಾವತಿ ತೀರದಲ್ಲಿ' ,'ಬೆಟ್ಟದ ಮನೆಯಲ್ಲಿ' ಮತ್ತು ಹಳೆಯ ಪಳೆಯ ಮುಖಗಳು, ಈ ಪ್ರಬಂಧ ಹಾಗೂ ಎ.ಎನ್. ಮೂರ್ತಿರಾವ್ ಅವರ 'ಸಮಗ್ರ ಲಲಿತ ಪ್ರಬಂಧಗಳನ್ನು' ನನ್ನ ಅಧ್ಯಯನ ವ್ಯಾಪ್ತಿಗೆ ಒಳಪಡಿಸಿರುತ್ತೇನೆ.

ಈ ಇಬ್ಬರು ಲೇಖಕರ ಲಲಿತ ಪ್ರಬಂಧಗಳಲ್ಲಿ ಸಮಾಜದಲ್ಲಿ ನಡೆಯುವ ಮತ್ತು ಬದುಕಿನಲ್ಲಿ ನಡೆಯುವ ಘಟನೆಗಗಳು ಪ್ರಮುಖ ವಸ್ತುವಾಗುತ್ತದೆ. ಇವುಗಳು ಒಂದು ರೀತಿಯ ತಿಳಿಹಾಸ್ಯದ ಮೂಲಕ ಸಮಾಜವನ್ನು ವಿಡಂಬನೆ ಮಾಡುವ ಚಿತ್ರಣ ಕೇಂದ್ರಬಿಂದುವಾಗಿಸಿಕೊಂಡಿದೆ. ಇವುಗಳು ಒಂದೇ ಸಮುದಾಯಕ್ಕೆ ಸೇರಿದವು. ಅದರೆ ಅವರ ಪ್ರಬಂಧಗಳಲ್ಲಿ ಕಂಡು ಬರುವ ವಸ್ತುವಿಗೆ ಸಂಬಂಧಿಸಿದ ವಸ್ತು ವಿನ್ಯಾಸ ಅಧ್ಯಯನಕ್ಕೆ ಒಳಪಡಿಸುವುದು ಈ ನಿಬಂಧದ ಪ್ರಮುಖ ಉದ್ದೇಶವಾಗಿದೆ.

ಸಾಮಾನ್ಯ ಜನರ ದೈನಂದಿನ ಬದುಕು, ಕೌಟುಂಬಿಕ ವ್ಯವಸ್ಥೆ ಮತ್ತು ಗ್ರಾಮೀಣ ಜನರ ಜೀವನ ಕ್ರಮಗಳು, ಲೇಖಕರು, ಕವಿಗಳ, ಕಾವ್ಯ, ಕಥೆ, ನಾಟಕಗಳು, ಪ್ರಬಂಧಗಳ ವಸ್ತುವಾಗಿ ಪರಿಗಣಿತವಾದುದು ಸಮಕಾಲೀನ ಸಾಹಿತ್ಯದ ಮಹತ್ವದ ವಿಷಯ, ಗೊರೂರು ಮತ್ತು ಮೂರ್ತಿರಾವ್ ಅವರ ಪ್ರಬಂಧಗಳು

ಸಮಕಾಲೀನದಲ್ಲಿ ನಡೆದ ಘಟನೆಗಳು ಮತ್ತು ಪ್ರಚೋದನೆಗೆ ಒಳಗಾದ ವಿಷಯವನ್ನು ಆಧರಿಸಿದ ವಸ್ತುಗಳಿಂದ ಪ್ರಬಂಧ ರಚನೆಯಾಗಿರುವುದರಿಂದ ಈ ಲೇಖಕರ ಪ್ರಬಂಧಗಳುನ್ನು ತೌಲನಿಕ ಅಧ್ಯಯನಕ್ಕೆಯೋಗ್ಯವಾಗಿದ್ದು ಅವುಗಳನ್ನು ಈ ನಿಂಬಧದಲ್ಲಿ ತೌಲನಿಕ ಅಧ್ಯಾಯನದ ಮೂಲಕ ವಿಶ್ಲೇಷಣೆಗೆ ಒಳಪಡಿಸಿದ್ದೇನೆ. ಈ ಅಧ್ಯಾನದ ಅನೂಕೂಲಕ್ಕಾಗಿ ವಿಭಾಗ ಮಾಡಿಕೂಂಡಿರತ್ತೇನೆ

೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨. ಪ್ರಬಂಧ ಸಾಹಿತ್ಯದ ಸ್ವರೂಪ

೩. ಗೊರೂರು ಮತ್ತು ಎ.ಎನ್.ಮೂರ್ತಿರಾವ್ ಅವರ ಬದುಕು ಮತ್ತು ಬರಹ.

೪. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಪ್ರಬಂಧ ಸಾಹಿತ್ಯದ ಸ್ವರೂಪ.

೫. ಎ.ಎನ್.ಮೂರ್ತಿರಾವ್ ಅವರ ಪ್ರಬಂಧ ಸಾಹಿತ್ಯದ ಸ್ವರೂಪ

೬. ಗೊರೂರು ಮತ್ತು ಮೂರ್ತಿರಾವ್ ಅವರ ಪ್ರಬಂಧ ಸಾಹಿತ್ಯದ ತೌಲನಿಕ ಅಧ್ಯಯನ

ಅ) ಸಾಮಾಜಿಕ ಸಂವೇದನೆ

ಆ) ಗ್ರಾಮೀನ ಪರಿಸರ

ಇ) ಪ್ರಬಂಧದಲ್ಲಿ ಹಾಸ್ಯ ಮತ್ತು ವಿಡಂಬನಾತ್ಮಕ ಸನ್ನಿವೇಶಗಳು,

೭. ಉಪಸಂಹಾರ

ಹೀಗೆ ಮೇಲಿನ ಅಧ್ಯಾಯಗಳಂತೆ ವಿಭಾಗ ಮಾಡಿಕೊಂಡು ಇಬ್ಬರು ಪ್ರಬಂಧಕಾರರ ಭಿನ್ನವಾದ ವ್ಯಕ್ತಿತ್ವದಿಂದ ರಚನೆಯಾಗಿರುವ ಪ್ರಬಂಧಗಳು ಸಾಮಾಜಿಕ, ವೈಚಾರಿಕತೆ, ಸಾಂಸ್ಕೃತಿಕ ಅಂಶಗಳನ್ನು ತಮ್ಮಳಗೆ ಹೇಗೆ ಅಡಗಿಸಿಕೂಂಡಿವೆ ಎಂಬುದನ್ನು ವಿಶ್ಲೇಸಿಲಾಗುವುದು. ಗೊರೂರು ಹಳ್ಳಿಯ ಪರಿಸರವನ್ನು ಮೂಲವಾದ ವಸ್ತುವಿನ ಮೇಲೆ ಹೇಗೆ ಪ್ರಬಂಧ ರಚನೆ ಮಾಡಿದ್ದಾರೆ. ಮೂರ್ತಿರಾಯರು ಹಳ್ಳಿ ಮತ್ತು ನಗರ ವಸ್ತುವನ್ನು ಆಧರಿಸಿ ಪ್ರಬಂಧಗಳನ್ನು ಹೇಗೆ ರೂಪಿಸಿದ್ದಾರೆ ಎಂಬುದನ್ನು ತಿಳಿಯಲು ಈ ತೌಲನಿಕ ಅಧ್ಯಯನವನ್ನು ಮಾಡಲಾಗಿದೆ.

## ಅಧ್ಯಾಯ - ೨

# ಪ್ರಬಂಧ ಸಾಹಿತ್ಯದ ಸ್ವರೂಪ

ಲಲಿತ ಪ್ರಬಂಧವು ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಒಂದು. ಕನ್ನಡದಲ್ಲಿ ಲಲಿತ ಪ್ರಬಂಧ ನವೋದಯ ಸಾಹಿತ್ಯದೊಂದಿಗೆ ಪ್ರಾರಂಭವಾಯಿತು. ೨೦ನೇ ಶತಮಾನವು ತನ್ನ ಹಿಂದಿನ ಅವಸ್ಥೆಗಳನ್ನು ಬದಲಾಯಿಸಿಕೊಂಡು ಆಧುನಿಕತೆಯ ಕಡೆಗೆ ಹೆಜ್ಜೆ ಶತಮಾನವಾಗಿದೆ. ಇಲ್ಲಿಯವರೆಗೆ ಕನ್ನಡ ಸಾಹಿತ್ಯ ಪರಂಪರೆ ಇಂಗ್ಲೆಂಡಿನ ಸಾಹಿತ್ಯ ಪರಂಪರೆಯ ಪ್ರಭಾವದಿಂದ ತನ್ನ ಅಭಿವ್ಯಕ್ತಿಯನ್ನು ಹಲವಾರು ಮಜಲುಗಳಲೂ ಕಟ್ಟಿಕೊಡಲು ಆರಂಭಿಸಿತು. ಆಧುನಿಕ ಚಿಂತನೆಗಳೊಂದಿಗೆ ಹೊಸ ಹೊಸ ಪ್ರಕಾರಗಳು ಬರವಣಿಗೆಯಲ್ಲಿ ಕಾಣಿಸಿಕೊಂಡವು. ಕಥೆ, ಕಾದಂಬರಿ, ನಾಟಕ, ಪ್ರಬಂಧ, ಅನುವಾದ ಮುಂತಾದ ಪ್ರಕಾರಗಳು ಏಕಕಾಲಕ್ಕೆ ಸಂಭವಿಸಿದವು. ಒಟ್ಟಾರೆ ೨೦ನೇ ಶತಮಾನ ಸಾಹಿತ್ಯದ ಮಟ್ಟಿಗೆ ಬದಲಾವಣೆಗಳ ಯುಗ.

ಕನ್ನಡ ಸಾಹಿತ್ಯದ ಇತರ ಪ್ರಕಾರಗಳಲ್ಲಿ ಆಗಿರುವ ಬೆಳವಣಿಗೆಯೊಂದಿಗೆ ಹೋಲಿಸಿದರೆ ಪ್ರಬಂಧದ ಸಾಹಿತ್ಯದಲ್ಲಿ ಆಗಿರುವ ಕೆಲಸ ತುಂಬಾ ಕಡಿಮೆ. ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯ ಹೊಸ ಕಾವ್ಯ ಭಾವಗೀತೆಗಳು, ಸಣ್ಣಕತೆಗಳು,ಕಾದಂಬರಿ ಮೊದಲಾದ ಮುಖಗಳಲ್ಲಿ ಸಮೃದ್ಧವಾಗಿ ರಚನೆಯಾಗಿದೆ ಇಂತಹ ಸಂದರ್ಭದಲ್ಲಿ ಹುಟ್ಟಿಕೊಂಡ 'ಲಲಿತ ಪ್ರಬಂಧಗಳು' ಸಾಹಿತ್ಯ ಪ್ರಕಾರದಲ್ಲಿ ಹೊಸದೊಂದು ಛಾಯೆಯನ್ನು ಮೂಡಿಸಿತು ಎಂದರೆ ತಪ್ಪಗಲಾರದು. ನವೋದಯ ಸಾಹಿತ್ಯ ಸಂದರ್ಭದಲ್ಲಿ ಪಾಶ್ಚಾತ್ಯರ ಪ್ರೇರಣೆಯಿಂದ ರೂಪಗೊಂಡ ಸಾಹಿತ್ಯ ಪ್ರಕಾರಗಳಲ್ಲಿ 'ಲಲಿತ ಪ್ರಬಂಧ'ವೂ ಒಂದು. ಇದು ನಮ್ಮ ಗದ್ಯ ಸಾಹಿತ್ಯ ಪ್ರಕಾರಕ್ಕೆ ಸೇರುತ್ತದೆ. ಅತ್ಯಂತ ಸೃಜನಶೀಲ ಮತ್ತು ಲವಲವಿಕೆಯ ಈ ಪ್ರಕಾರ ನವೋದಯದ ಮಹತ್ವದ ಲೇಖಕರಿಂದ

ಅರ್ಥಪೂರ್ಣವಾಗಿ ಬೆಳೆದು ಬಂದಿದೆ. ಕುವೆಂಪು, ಬೇಂದ್ರೆ, ವಿ.ಸೀ. ಮೊದಲಾದ ಕವಿಗಳು, ನಾಕಸ್ತೂರಿ, ಶ್ರೀರಂಗ, ಎ.ಎನ್.ಮೂರ್ತಿರಾವ್, ಗೊರೂರು ,ಕಾರಂತರಂಥ ವಿಚಾರವಾದಗಳ ಗಮನವನ್ನು ಸೆಳೆದು 'ಲಲಿತ ಪ್ರಬಂಧಗಳ' ಇಂಗ್ಲೀಷ್ ನ ಪ್ರಬಂಧಕಾರರನ್ನು ಮೀರಿಸುವಂತೆ ಕನ್ನಡ ಸಾಹಿತ್ಯದಲ್ಲಿ ಫಲಿಸಿದ್ದು ವಿಶೇಷವಾದ ಸಂಗತಿಯಾಗಿದೆ.

ಸುಮಾರು ಎಂಟು ದಶಕಗಳ ಇತಿಹಾಸ ಹೊಂದಿದ ಈ ಪ್ರಕಾರವೂ, ನವೋದಯದ ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಕಾಲದಲ್ಲಿ ತನ್ನದೇ ಆದ ಸ್ವರೂಪವನ್ನು ಪಡೆಯಿತು. ಅದು ಭಾವಗೀತೆಯ ಸೊಗಸನು ಸಣ್ಣಕತೆಯ ರಂಜನೆಯನ್ನೂ ಒಳಗೊಂಡು ನವುರಾದ ಹಾಸ್ಯದೊಂದಿಗೆ ಅಗತ್ಯವಿದ್ದಾಗ ಚುರುಕಾದ ವಿಡಂಬನೆಯೊಂದಿಗೆ ಬದುಕಿನ ಹಲವು ಮಗ್ಗಲುಗಳನ್ನು ಚಿತ್ರಿಸಿದ್ದು ಮಹತ್ವದ ಸಂಗತಿಯಾಗಿದೆ. ಅದಕ್ಕಾಗಿಯೇ ಹೊಸಗನ್ನಡ ಸಾಹಿತ್ಯದ ಸಾಧನೆಯಲ್ಲಿ ಲಲಿತ ಪ್ರಬಂಧ ಬೆಳವಣಿಗೆಯನ್ನು ಮರೆಯುವಂತಿಲ್ಲ.

ಲಲಿತ ಪ್ರಬಂಧ ಎಂಬುದು ಕನ್ನಡದ ಲೇಖಕರು ಗುರುತಿಸಿದ ಹೆಸರು ಇದರ ಜೊತೆಗೆ 'ಹರಟೆ' ಎಂಬ ಪದವನ್ನು ಸೂಚಿಸುತ್ತದೆ. ಆದರೆ ಎ.ಎನ್ ಮೂರ್ತಿರಾವ್ ರವರು 'ಹರಟೆ' ಮತ್ತು 'ಪ್ರಬಂಧ' ಎಂಬ ಲೇಖನದಲ್ಲಿ ಅವೆರಡನ್ನು ಪ್ರತ್ಯೇಕಿಸುತ್ತಾರೆ.

ನಮ್ಮಲ್ಲಿ 'ಹರಟೆ' ಎಂಬ ಪದವನ್ನು ಇಂಗ್ಲೀಷ್‌ನಲ್ಲಿ ಎಸ್ಸೆಗೆ ಪರ್ಯಾಯ ಪದವಾಗಿ ಉಪಯೋಗಿಸುವುದುಂಟು. ಈ ಪ್ರಯೋಗ ಅಷ್ಟೇನೂ ಸಾದುವಿಲ್ಲ ಎನ್ನಿಸುತ್ತದೆ. ಹರಟೆಗೆ ಆರಂಭವುಂಟೆ ಹೊರತು, ಅಂತ್ಯವೂ ಇಲ್ಲ, ಕೇಂದ್ರವೂ ಇಲ್ಲ, ಅನಿಶ್ಚಿತಗತಿಯೇ ಅದರ ಲಕ್ಷಣ, ಆದರಿಂದ ಬರುವ ಫಲ ಅನಿರೀಕ್ಷಿತ ಫಲ.'ಎಸ್ಸೆ' ಗಾದರೂ ಇದನ್ನು ಲಲಿತ ಪ್ರಬಂಧ ಎಂದು ಕರೆಯೋಣ ಆದಿ, ಅಂತ್ಯ, ಕೇಂದ್ರಗಳಲ್ಲವೊಂಟು.

ಪ್ರಬಂಧಕಾರನ ವ್ಯಕ್ತಿತ್ವವೇ ಅದರ ಕೇಂದ್ರ, ಪ್ರಬಂಧವೆಲ್ಲಾ ಆ ಕೇಂದ್ರದ ಸುತ್ತವಾಗಿ ಬೆಳೆಯುತ್ತದೆ. ಬೇಂದ್ರೆಯವರು 'ನಿರಾಭರಣ ಸುಂದರಿ' ಯಲ್ಲಿಯ ತಮ್ಮ ಪ್ರಬಂಧಗಳನ್ನು ಹರಟೇಗಳೆಂದೇ ಕರೆದಿದ್ದಾರೆ, ಆಗಿನ್ನೂ ಹರಟೆ ಮತ್ತು ಪ್ರಬಂಧಗಳಿಗಿರುವ ಸೂಕ್ಷ್ಮ ವ್ಯತ್ಯಾಸ ಗಮನಕ್ಕೆ ಬಂದಿರಲಕ್ಕಿಲ್ಲವೆಂದು ಹೇಳಬಹುದು. ಈಗಲೂ ಕೂಡ ಕೆಲವರು ಹರಟೆ ಮತ್ತು ಪ್ರಬಂಧ ಎರಡೂ ಒಂದೇ ಎಂದು ಭಾವಿಸುವುದುಂಟು.

ಸಾಮಾನ್ಯವಾಗಿ ನಾವೂ ಇಂಗ್ಲೀಷನ ಇತ್ತೀಚಿನ ಎಂಬುದಕ್ಕೆ ಸಂವಾದಿಯಾಗಿ 'ಪ್ರಬಂಧ' ಎಂಬ ಪದವನ್ನು ಬಳಸಲಾಗುತ್ತದೆ. ಸಂಶೋಧನಪ್ರಬಂಧ ಮತ್ತು ಮಹಾ ಪ್ರಬಂಧ ಎಂಬ ಎರಡು ಪದಗಳನ್ನು ಇಲ್ಲಿ ಗಮನಿಸಬಹುದು ಹಾಗೆಯೇ 'ಲಲಿತ ಪ್ರಬಂಧ' ಎಂಬುದೂ ರೂಢಿಯಲಿದೆ. ಲಲಿತ ಪ್ರಬಂಧವು ಯಾವುದಾದರೂ ಒಂದು ವಿಷಯವನ್ನು ಕುರಿತು, ಅದರ ವಚನ ರೂಪದಲ್ಲಿ ಬರೆದುದು ಆಗಿದೆ. ಬರಹಗಾರನು ತನ್ನ ಮನೋಲಹರಿಗಳನ್ನು ವಿಶಿಷ್ಟಕ್ರಮದಲ್ಲಿ ಅರಳಿಸಿ ಅಭಿವ್ಯಕ್ತಿಗೊಳಿಸುವ ಒಂದು ರೀತಿಯಿದು. ಇದು ಒಂದು ವಿಷಯದ ವಿವರಣೆ ಮಾತ್ರವಲ್ಲ. ಲೇಖಕನು ಅರಿಸಿರುವ ವಿಷಯವನ್ನು

ಕುರಿತು. ಆತನ ಮನಸ್ಸಿನಲ್ಲಿ ಮಾಡಿದ ಭಾವನೆಗಳು, ಕ್ರಮಬದ್ಧ ಚಿತ್ರಣ, ಅವನ ವ್ಯಕ್ತಿತ್ವದ ಕೈಗನ್ನಡಿಯಾಗಿದೆ.

[೧] ಲಲಿತ ಪ್ರಬಂಧದದ ಮುಖ್ಯ ಲಕ್ಷಣವನ್ನು ಹೀಗೆ ಸಂಗ್ರಹಿಸಬಹುದು.

೧. ಪ್ರಪಂಚದ ಯಾವುದೇ ವಿಷಯ ಪ್ರಬಂಧದ ವಸ್ತುವಾಗಬಲ್ಲುದು.

೨. ಗಾತ್ರದಲ್ಲಿ ಸಣ್ಣದಾಗಿರುವುದೇ ಹೆಚ್ಚು ಅಪರೂಪಕ್ಕೆ ಒಂದಿಷ್ಟು ದೀರ್ಘವಾಗಿಯೂ ಇರಬಹುದು.

೩. ರಸಿಕ ವ್ಯಕ್ತಿತ್ವದ ನಿರೂಪಣೆಯಾಗಿದ್ದು, ಸರಳ ರಸವತ್ತಾದ ಶೈಲಿ ಅದಕ್ಕಿರಬೇಕು ಸರಸಸಲ್ಲಾಪ ಹೆಚ್ಚು ಪ್ರಿಯವಾದುದು.

೪. ನೇರವಾದ ನೀತಿ ಭೋಧನೆ ಇರಬೇಕಾದುದಿಲ್ಲ. ಪರೋಕ್ಷವಾಗಿ ಅದೂ ಇರಬಹುದು.

೫. ಭಾಷೆಯ ಸಂಪೂರ್ಣ ಕಿಷ್ಟವಾಗಿಯೇ ಇರಬೇಕಾದ ಅಗತ್ಯವಿಲ್ಲ ದೇಸಿಯಿಂದ ಕೂಡಿದಷ್ಟು ಅದರ ಸೊಗಸು ಹೆಚ್ಚುತ್ತದೆ.

೬. ಮಾನವನ ಸಮಾಜದ, ಸರ್ಕಾರದ ಓರೆ ಕೋರೆಗಳನ್ನು ವಿನೋದದ ಹಿನ್ನಲೆಯಲ್ಲಿ ಹೇಳುವುದು. ಅದರ ಇನ್ನೊಂದು ವಿಶಿಷ್ಟ ಲಕ್ಷಣ.

೭. ಲಲಿತ ಪ್ರಬಂಧದ ಲೇಖಕನು ಬಹುಶ್ರುತನಾಗಿದ್ದಷ್ಟೂ ಒಳ್ಳೇಯದು.

೮. ಸ್ಥಳೀಯ ಅಥವಾ ಸಕ್ರಿಯ ವಿಷಯ ಪ್ರಬಂಧದಲ್ಲಿದ್ದರೂ ಅದು ಸಾರ್ವತ್ರಿಕಗೊಳ್ಳುವ ಸಾಮರ್ಥ್ಯವನ್ನು ಪಡೆದಿರಬೇಕು.

೯. ಕನ್ನಡದ ಲಲಿತ ಪ್ರಬಂಧಗಳನ್ನು ಎರಡೂ ವಿಧವಾಗಿ ವಿಂಗಡಿಸಬಹುದಾಗಿದೆ.

ಹಾಸ್ಯ ಪ್ರಧಾನವಾದವು. ಚಿಂತನೆ ಪ್ರಧಾನವಾದವು ಈ ವಿಭಜನೆ ಬರಹಗಾರರ ವ್ಯಕ್ತಿತ್ವವನ್ನು ಅವಲಂಬಿಸಿರುತ್ತದೆಂದು ಹೇಳಬಹುದು.

ಒಟ್ಟಿನಲ್ಲಿ ಲಲಿತ ಪ್ರಬಂಧ ಲಕ್ಷಣವನ್ನು ಹೇಳುವುದಾದರೆ ಯಾವುದೇ ಒಂದು ವಿಷಯವನ್ನು ಕುರಿತು ಮಿತವಾದ ಸರಳ ಸುಂದರವಾದ ಶೈಲಿಯನ್ನೊಳಗೊಂಡ ಸಂಪೂರ್ಣತೆಯ ಅಭಾವವನ್ನು ಹೊಂದಿರುವ ರಚನೆಯನ್ನು ಲಲಿತ ಪ್ರಬಂಧ ಎನ್ನಬಹುದು.

---

ಅಡಿಟಿಪ್ಪಣಿ

೧. ಶತಮಾನದ ಲಲಿತ ಪ್ರಬಂಧ

ಪ್ರಸ್ತಾವನೆ ಪುಟ ಸಂಖ್ಯೆ (೨), ಗುರುಲಿಂಗ ಕಾಪಸೆ

ಬಿ. ವೆಂಕಟಚಾರ್ಯರು ಬಂಗಾಳಿ ಕಾದಂಬರಿಗಳನ್ನು ಕನ್ನಡಕ್ಕೆ ತಂದಂತೆ ಬಂಕಿಮ ಚಂದ್ರರ ಕೆಲವು ಪ್ರಬಂಧಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. "ಲೋಕರಹಸ್ಯ" ಎಂಬ ಅವರ ಅನುವಾದಿತ ಪ್ರಬಂಧ ಸಂಕಲನವೇ ಕನ್ನಡದ ಮೊದಲ ಪ್ರಬಂಧ ಸಂಕಲನವಾಗಿದೆ.

ಕನ್ನಡದಲ್ಲಿ ಧಾರವಾಡದ ಗೆಳೆಯರ ಗುಂಪಿನವರು ೧೯೩೯ ರಲ್ಲಿ ಇಪ್ಪತ್ತಾರು ಪ್ರಬಂಧಗಳ ಸುಳುವು-ಹೊಳುವು ಪ್ರಕಟಿಸಿದ್ದು ಐತಿಹಾಸಿಕವಾಗಿ ನೆನಪಿಡಬೇಕಾದ ಸಂಗತಿ. ಈ ಸಂಗ್ರಹದಲ್ಲಿ ದ.ರಾ.ಬೇಂದ್ರೆ, ಮಧುರಚನ್ನ, ವಿ.ಕೃ.ಗೋಕಾಕ್, ರಂ.ಶ್ರೀಮುಗಳಿಯವರ ಪ್ರಬಂಧಗಳು ಪ್ರಕಟವಾಯಿತು. ಪು.ತಿ.ನ. ಅವರ ರಾಮಚಾರಿಯ ನೆನಪು' ಪ್ರಥಮ ಲಲಿತ ಪ್ರಬಂಧ ಸಂಕಲನ, ನವೋದಯ ಸಂದರ್ಭದಲ್ಲಿ 'ಲಲಿತ ಪ್ರಬಂಧ' ಸಾಹಿತ್ಯ ಚೆನ್ನಾಗಿಯೇ ಬೆಳೆಯಿತು. ನಾ,ಕಸ್ತೂರಿ, ಎ.ಎನ್.ಮೂರ್ತಿರಾವ್ ವಿ.ಸೀ.ರಾಕು. ಮುಂತಾದವು ಈ ಕ್ಷೇತ್ರವನ್ನು ಬಳಸಿದವರಲ್ಲಿ ಪ್ರಮುಖವದರು.

ಎಂ.ವಿ.ಸೀತಾರಾಮಯ್ಯ ಅವರ 'ಧೂಮಲೀಲೆ' ಮತ್ತು ಮುಗಿಲುಗಳು, ಹಾ.ಮಾ.ನಾಯಕರ "ನಮ್ಮ ಮನೆಯ ದೀಪ" ಗೊರೂರು ಹೇಮಾವತಿ ಮತ್ತು ಇತರ ಪ್ರಬಂಧಗಳು, ರಾ.ಯ. ಧಾರವಾಡಕರ ಅವರ "ಧೂಮವಲಯಗಳು ಮತ್ತು ತೂರಿದ ಚಿಂತನೆಗಳು, ಸಿಂಪಿ ಲಿಂಗಣ್ಣನವರ 'ನೂರು ಗಡಿಗೆ ಒಂದು ಬಡಿಗೆ' ಈ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸಿರುವ ಮುಖ್ಯ ಲೇಖಕರೆಂದರೆ ತೀ.ನಂ.ಶೀ. ಕುವೆಂಪು, ಪು.ತಿ.ನ. ಅ.ರಾ.ಮಿತ್ರ ಹಾಗೂ ಇತ್ತೀಚಿಗೆ ಚಂದ್ರಶೇಖರ ಆರೂರು, ಕೃಷ್ಣಮೂರ್ತಿ ಬಳಿಗೆರೆ ಮುಂತಾದವರು ಲಲಿತ ಪ್ರಬಂಧದ ಪ್ರಕಾರವಣನು ಕನ್ನಡ ಸಾಹಿತ್ಯದಲ್ಲಿ ಅಭಿವೃದ್ಧಿಗೊಳಿಸಿದ್ದಾರೆ. ಇವರೆಲ್ಲಿ ಒಂದಲ್ಲ ಒಂದು ರೀತಿಯಿಂದ ನವೋದಯದ ಜಾಡಿನಲ್ಲಿಯೇ ಬಂದವರು ಮತ್ತು ಬೆಳೆದವರು.

ಎ.ಎನ್. ಮೂರ್ತಿರಾಯರು 'ಹಗಲುಗನಸುಗಳು' 'ಅಲೆಯಮನ' , 'ಮಿನುಗುಮಿಂಚು',ರಾಕು ಅವರ ಗಾಳಿಪಟ ಹೀಗೆ ಉತ್ತಮವಾದ ಪ್ರಬಂಧಗಳು ಕನ್ನಡ ಸಾಹಿತ್ಯಕ್ಕೆ ಬಂದಿದೆ.

ಕನ್ನಡ ಸಾಹಿತ್ಯದಲ್ಲಿ ನವ್ಯ ಸಾಹಿತ್ಯವು ಅಬ್ಬರ ಮಾಡುತ್ತಲೇ ಪ್ರವೇಶಿಸಿತು. ಇದಕ್ಕೆ ವಿ.ಕೃ.ಗೋಕಾಕರು ಚಾಲನೆ ಕೊಟ್ಟರು. ಅಡಿಗರ ನೇತೃತ್ವದಲ್ಲಿ ಇದಕ್ಕೆ ಒಂದು ಉನ್ನತ ಸ್ಥಾನವನ್ನು ಲಭಿಸಿತು. ನವ್ಯದ ಕಾಲದಲ್ಲಿ ಕತೆ, ಕಾದಂಬರಿ, ಮತ್ತು ವಿಮರ್ಶೆ ಹೆಚ್ಚು ಬೆಳವಣಿಗೆಗಳು ಪಡೆದುಕೊಂಡಿತು.

ನವ್ಯದ ಸಂದರ್ಭದಲ್ಲಿ ಲಲಿತ ಪ್ರಬಂಧ ಬಾಡಿತೆಂದು ಹೇಳಬಹುದು ಹಾಗಿದ್ದರೂ, ಅಡಿಗರು ಒಂದೆರಡು ಪ್ರಬಂಧ ಬರೆದು ಲಲಿತ ಪ್ರಬಂಧಕ್ಕೆ ಸ್ಥಾನವನ್ನು ತಂದುಕೊಟ್ಟರು. ಅ.ರಾ.ಮಿತ್ರ ವಿರೇಂದ್ರ ಸಿಂಪಿ. ಎಚ್.ಜಿ. ಸುಣ್ಣಗುಡ್ಡಯ್ಯ , ಪಿ.ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಚಂದ್ರಶೇಖರ ಆಲೂರು, ಇತ್ಯಾದಿ ಲೇಖಕರ ಪ್ರಬಂಧಗಳು ಗಮನ ಸೆಳೆಯುತ್ತವೆ. ಮಹಿಳೆಯರಲ್ಲಿ ಟಿ.ಸುನಂದಮ್ಮ ಮಹತ್ವದ ಪ್ರಬಂಧಕಾರರಾಗಿ ಕಾಣುತ್ತಾರೆ.

ಕನ್ನಡದಲ್ಲಿ ವಾರಪತ್ರಿಕೆಗಳು, ದಿನಪತ್ರಿಕೆಗಳು ಹರಟೆ ಅಥವಾ ಲಲಿತ ಪ್ರಬಂಧವನ್ನು ಪ್ರಕಟಿಸುತ್ತಲೆ ಇವೆ ಕೊರವಂಜ ವಿನೋದಿಸಿ ವಿಕಟ ವಿನೋದಿನಿಯಂಥ ನಿಯತ ಕಾಲಿಕೆಗಳು ಹಾಸ್ಯಕ್ಕೆ ವಿಶೇಷವಾದ ಸ್ಥಾನ ಮೀಸಲಾಗಿದೆ ಎಂದು ಹೇಳಬಹದು. ನವೋದಯ ಸಾಹಿತ್ಯ ರಚನೆಯ ಕಾಲ ಘಟ್ಟದಲ್ಲಿ ಬೆಳಕಿಗೆ ಬಂದ ಲಲಿತ ಪ್ರಬಂಧ ಗಳು ಸಹೃದಯರ ಮನಸ್ಸನ್ನು ಗೆಲ್ಲುವಲ್ಲಿ ಯಶಸ್ವಿಯಾಗಿದೆ. ಲಲಿತ ಪ್ರಬಂಧ ಎನ್ನುವುದು ಸರಳತೆ, ರಮ್ಯತೆ ತಿಳಿಹಾಸ್ಯ ದೊಂದಿಗೆ ಸಮಾಜದಲ್ಲಿನ ವಿಶೇಷವಾಗಿ ರಾಜಕೀಯ ಸಾಮಾಜಿಕ ಜೀವನದ ಒಳಪದರಗಳನ್ನು ವಿಡಂಬನೆಯ ಮೂಲಕ ತಿಳಿಸುತ್ತದೆ.

ಪ್ರಬಂಧಕ್ಕೆ ಗುರಿಯುಂಟು ಅದು ಭಾವ ಪ್ರವಾಹದಲ್ಲಿ ಹೊರಟು ಒಂದು ಕಡೆ ದಡವನ್ನು ಸೇರಬೇಕು. ಆದರಿಂದ ಬರುವ ಫಲ ನಿರೀಕ್ಷಿತ ಫಲವಾಗಿರುತ್ತದೆ.

## ಅಧ್ಯಾಯ – ೩

## ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್. ಮೂರ್ತಿರಾವ್ ರವರ ಬದುಕು ಮತ್ತು ಬರಹ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಹಾಸ್ಯ ಸಾಹಿತ್ಯದಲ್ಲಿ ಅದಕ್ಕೊಂದು ಪ್ರಮುಖ ಸ್ಥಾನವನ್ನು ದೊರಕಿಸಿಕೊಟ್ಟ ಕೀರ್ತಿ ಗೊರೂರು ರಾಮಸ್ವಾಮಿ ಅಯ್ಯಂಗ್ ಅವರದು. ಇವರು ಸಾಹಿತ್ಯದ ಹಿರಿಯ ತಲೆಮರಿನ ಲೇಖಕರಲೊಬ್ಬರು. ಪ್ರಥಮ ಶ್ರೇಣಿಯವರೂ ಕೂಡ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ೧೯೦೪ ರಲ್ಲಿ ಹಾಸನ ಜಿಲ್ಲೆಯ ಗೊರೂರು ಗ್ರಾಮದಲ್ಲಿ ಜನಿಸಿದರು. ಅವರ ತಂದೆ ಶ್ರೀನಿವಾಸ ಅಯ್ಯಂಗಾರ್, ತಾಯಿ ಲಕ್ಷಮ್ಮ ತಮ್ಮ ಹಳ್ಳಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ಗೊರೂರು ಹಾಸನದ ಸರ್ಕಾರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಗಾಂಧೀಜಿಯ ಅಸಹಕಾರ ಚಳುವಳಿಯಿಂದ ಆಕರ್ಷಿತರಾಗಿ ಶಿಕ್ಷಣಕ್ಕೆ ವಿದಾಯ ಹೇಳಿದರು. ಗೊರೂರು ಬಾಲ್ಯದಲ್ಲಿ ಶಿಸ್ತು ಹೆಚ್ಚಾಗಿತ್ತು. ಹಿಂದಿನ ಕಾಲದ ಪದ್ಧತಿಯಂತೆ ಇವರ ಮನೆಯು ಯಾವಾಗಲೂ ನೆಂಟರು ಇಷ್ಟರಿಂದ ತುಂಬಿರುತ್ತಿತ್ತು. ಹೀಗೆ ಸದಾಕಾಲವು ತುಂಬಿರುವ ಮನೆಯಲ್ಲಿ ಪ್ರತಿಯೊಬ್ಬರೂ ಅವರವರ ಪಾಲಿಗೆ ದೊರೆತ ಸುಖವನ್ನೂ ನೆಮ್ಮದಿಯನ್ನು ಅನುಭವಿಸಿಕೊಂಡು ಹೋಗುತ್ತಿದ್ದರು.

ಗೊರೂರು ರಾಮಸ್ವಾಮಿ ಅಯ್ಯಂಗಾರರು ಶಾಲಾ ಕಾಲೇಜುಗಳಲ್ಲಿ ಓದಿ ಪರೀಕ್ಷೆಗಳನ್ನು ತೆಗೆದುಕೊಂಡು ಪದವೀಧರರಾದವರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡ ವಿದ್ವಾನ್ ಪರೀಕ್ಷೆಯೊಂದರಲ್ಲಿ ಮಾತ್ರ ತೇರ್ಗಡೆಯಾಗಿದ್ದರು. ಗೊರೂರು ಶಾಲಾ ಕಾಲೇಜಿನ ಶಿಕ್ಷಣವಿಲ್ಲದೆ ಜೀವನದಲ್ಲಿ ಕಲಿತದ್ದೇ ಹೆಚ್ಚು. ದೇಶ ಸೇವೆಗೆ ಸಂಭವಿಸಿದ ಅನೇಕ ಕೆಲಸಗಳನ್ನು ಮಾಡುತ್ತಾ ಅನುಭವವನ್ನು ಗಳಿಸಿದರು. ತದ ನಂತರ ಅವರು ಗಾಂಧೀಜಿಯ ಆಶ್ರಮವನ್ನು ಸೇರಿ ಗುಜರಾತಿನ ವಿದ್ಯಾಪೀಠದಲ್ಲಿ ವಿದ್ಯಾರ್ಥಿಯಾದರು.

ತಿಲಕರ ಸಾವಿನ ಸುದ್ದಿಯಿಂದ ಕ್ಷೋಭೆಗೊಂಡ ವಿದ್ಯಾರ್ಥಿಗಳು ತರಗತಿಯಿಂದ ಮೆರವಣಿಗೆಯಲ್ಲಿ ಹೊರಟಾಗ ಗೊರೂರರೇ ಅದಕ್ಕೆ ನಾಯಕರಾಗಿಬಿಟ್ಟಿದ್ದರು. ಬ್ರಿಟಿಷ್ ಸರ್ಕಾರವನ್ನು ಮನಸಾರೆ ಬೈದು, ವಿದೇಶಿ ವಸ್ತುಗಳನ್ನೆಲ್ಲಾ ದಹಿಸಿದರು. ಎಲ್ಲರಿಗೂ ಖಾದಿ ಟೋಪಿಗಳನ್ನು

ಒದಗಿಸಲಾಯಿತು. ರಾಷ್ಟ್ರೀಯ ಚಳುವಳಿಯ ಆ ದಿನಗಳಲ್ಲಿ (೧೯೧೯ ರಿಂದ ೨೧) ಗಾಂಧೀಜಿಯವರ ಸಂಪರ್ಕದಿಂದಾಗಿ ಚಳುವಳಿ ಒಂದು ಧರ್ಮಯುದ್ಧದ ಸ್ವರೂಪವನ್ನು ಪಡೆದುಕೊಂಡಿತಂತೆ. ಒಂದು ವರ್ಷದಲ್ಲಿ ಸ್ವರಾಜ್ಯ ಘೋಷಣೆಯೊಂದಿಗೆ ಸ್ವಾತಂತ್ರ್ಯ ಸಂಗ್ರಾಮ ಬಿರುಸುಗೊಂಡಾಗ ತಮ್ಮ ಮೇಲೆ ಆದ ಪ್ರಭಾವ ಪರಿಣಾಮವನ್ನು ಗೊರೂರು ಪ್ರಭಾವಗಳನ್ನು ಸ್ಮರಿಸಿಕೊಳ್ಳುತ್ತೇವೆ.

"ನನ್ನ ಮಟ್ಟಿಗೆ ಹೇಳುವುದಾದರೆ ನನಗೆ ಸ್ವಾತಂತ್ರ್ಯ ಸ್ವರಾಜ್ಯದ ಗುಂಗಿನ ಹುಚ್ಚೇ ಹತ್ತಿತ್ತು. ಯಾವಾಗಲೂ ಅದೇ ಸೂಚನೆ, ನಿದ್ರೆಯಲ್ಲೂ ಅದೇ ಕನಸು. ಯುವಕನಿಗೆ ಪ್ರಿಯಯುವತಿಯ ಮೇಲೆ ಎಷ್ಟುತದೇಕ ಧ್ಯಾನವೋ ಸ್ವರಾಜ್ಯವನ್ನು ಕುರಿತು ಸಾಧನೆ ನನಗೆ ಅದಕ್ಕಿಂತ ಹೆಚ್ಚುಪ್ರಿಯವಾಗಿತ್ತು. ಭಾರತದ ನಾನಾ ಕಡೆ ಚಳುವಳಿ ಬಿಗಡಾಯಿಸಿ ಜನತೆ ಸಹಸ್ರ ಸಂಖ್ಯೆಯಲ್ಲಿ ಸೆರೆವಾಸವನ್ನು ಸೇರುತ್ತಿರುವ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದುವಾಗಲೆಲ್ಲ 'ನಾನು ಯಾಕೆ ಇಲ್ಲಿ ಹೀಗೆ ಈ ಇಂಗ್ಲೀಷು ಆಲ್ಜೀಬ್ರಾ ಸೈನ್ಸ್‌ಗಳತ್ತ ಕುಳಿತಿದ್ದೀನಿ? ಎನಿಸುತ್ತಿತ್ತು. ಗುಲಾಮರನ್ನು ಸೃಷ್ಟಿಸುವ ಈ ವಿದ್ಯೆ ಯಾಕೆ ಎನಿಸಿತು. ಎಂಬ ಮಾತುಗಳನಾಡಿದಿದ್ದಾರೆ.

ಸ್ವಾತಂತ್ರ್ಯ ಚಳುವಳಿ ತೀವ್ರವಾಗಿ ನಡೆಯುತ್ತಿದ ಧಾರವಾಡದಲ್ಲಿ ಹುಕ್ಕೇರಿಕರ್ ಅವರು ರಹಸ್ಯವಾಗಿ ಏರ್ಪಡಿಸಿದ್ದ ಸಾರ್ವಜನಿಕ ಸಭೆಯಲ್ಲಿ ಬ್ರಿಟೀಷ್ ಸರ್ಕಾರದ ವಿರುದ್ದ ವಾಗ್ದಾಳಿಯನ್ನೆ ನಡೆಸಿದರು.

ಬಳಿಕ ಮದರಾಸಿನ 'ಲೋಕವಿಕ' ಎಂಬ ಕನ್ನಡ ಪತ್ರಿಕೆಯ ಉಪಸಂಪಾದಕರಾಗಿ 'ಆಂಧ್ರಪತ್ರಿಕೆ' ಮತ್ತು 'ಭಾರತ' ಪತ್ರಿಕೆಗಳ ಕನ್ನಡ ಸಮಾಚಾರ ಲೇಖಕರಾಗಿ ಸ್ವಲ್ಪಕಾಲ ಕೆಲಸ ಮಾಡಿದರು ನಂತರ ಗೊರೂರರು ಬೆಂಗಳೂರಿಗೆ ಹಿಂದಿರಿಗೆ ಕೆಂಗೇರಿಯ 'ಗುರುಕುಲಾಶ್ರಮ' ವೆಂಬ ರಾಷ್ಟ್ರೀಯ ಧ್ಯೆಯೋದ್ದೇಶದ ಶಿಕ್ಷಣ ಶಾಲೆಯಲ್ಲಿ ಸೇವೆಸಲ್ಲಿಸತೊಡಗಿದರು. ಇಲ್ಲಿಯ ಕಾರ್ಯಕ್ರಮಗಳು ವೈಶಿಷ್ಟ್ಯವೆಂದರೆ ಅಲ್ಲಿಯ ಜೀವನ ಕ್ರಮಕ್ಕೆ ಗಾಂಧೀಜಿಯವರ ಸಬರಮತಿ ಆಶ್ರಮವೇ ಮಾದರಿ' ಜಾತಿಮತಗಳ ವ್ಯತ್ಯಾಸವಿರಲಿಲ್ಲ ಹರಿಜನರಿಗೆ ವೇದ ಉಪನಿಷತ್ತು, ವಿಷ್ಣು ಸಹಸ್ರ ನಾಮಗಳನ್ನು ಹೇಳಿಕೊಟ್ಟುದುಂಟು, ಹಾಗೂ ಹೋಮ, ಹವನ, ಅಡುಗೆ ಕಾರ್ಯಗಳಲ್ಲಿಯೂ ಅವರನ್ನು ಸಹಭಾಗಿಗಳಾಗಿಸಿಕೊಂಡು ಗುರುಕುಲದಲ್ಲಿ ಗಾಂಧೀಜಿ ಭೋದಿಸುತ್ತಿದ್ದ 'ಹಳ್ಳಿಗಳಿಗೆ' ಹಿಂದಿರುಗಿ ಧ್ಯೇಯದ ಪ್ರತೀಕವಾಗಿಯೇ ಇತ್ತೆಂದು ಗೊರೂರು ಭಾವಿಸಿದ್ದರು.

ಗೊರೂರು ಈ ಕಾಲದಲ್ಲಿಯೇ 'ನಮ್ಮ ಊರಿನ ರಸಿಕರು' ಸಂಗ್ರಹವನ್ನು ಬರೆದರು. ಮೊದಲು ಮಾಸ್ತಿಯವರ ಮನೆಯಲ್ಲಿ ವಾಚನವಾಯಿತಂತೆ ಬಿ.ಎಂ.ಶ್ರೀ. ಮಾಸ್ತಿ, ಡಿ.ವಿ.ಜಿ. ಮೊದಲಾದವರು

ಬಂದಿದ್ದರು. ಅಂಥವರು ಮೆಚ್ಚಿಕೊಂಡದ್ದು ಗೊರೂರಿಗೆ ಧೈರ್ಯವನ್ನು ತಂದುಕೊಟ್ಟಿತ್ತು. ಗೊರೂರು ಬೆಂಗಳೂರಿನ ಅಖಿಲಭಾರತ ಭಾರತ ಸಂಘದ ಖಾದಿ ವಸ್ತ್ರಾಲಯದ ಹೊಣೆಯನ್ನು ಹೊತ್ತರು. ನಂತರ ಗೊರೂರು 'ಮೈಸೂರು ಗ್ರಾಮ ಸೇವಾ ಸಂಘ' ಎಂಬ ಸಂಘವನ್ನು ಕಟ್ಟಿಕೊಂಡರು ಗ್ರಾಮ ಸಂಘ ಸೇವೆಯಲ್ಲಿ ನಿರತರಾದರು.

೧೯೪೨ ರಲ್ಲಿ 'ಕ್ವಿಟ್ ಇಂಡಿಯಾ' ಹೋರಾಟದಲ್ಲಿ ಗೊರೂರು ಭಾಗವಹಿಸಿದರು. ತಂದೆಗೆ ಪಾರ್ಶ್ವವಾಯುವಿನಿಂದ ಹಾಸಿಗೆ ಹಿಡಿದು ಗೊರೂರು ತಾಯಿಯ ಎಂಟನೇ ತಿಂಗಳಿನ ಶ್ರಾದ್ಧವನ್ನು ಮಾಡುತ್ತಿದ್ದಾಗ ಪೋಲಿಸರು ಅವರನ್ನು ಬಂಧಿಸಿದರು. ಅಲ್ಲಿಂದ ೧೯ ತಿಂಗಳು ಜೈಲಿನ ವಾಸ, ೧೯೪೭ ರಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರು ಸಂಸ್ಥಾನದಲ್ಲಿ ನಡೆದ ಹೋರಾಟದಲ್ಲಿ ಗೊರೂರು ಹಿರಿಯ ಮಗ ೧೭ ವರ್ಷದ ರಾಮಚಂದ್ರ ತುಮಕೂರಿನಲ್ಲಿ ಪೋಲಿಸರ ಗುಂಡಿಗೆ ಆಹುತಿಯಾದ ನಾಡಿಗಾಗಿ ಹೋರಾಡಿದ ಜೀವನ ಒತ್ತೆಯಿಟ್ಟು ಗೊರೂರರು ಎಲ್ಲಾ ಜಂಜಾಟಗಳ ನಡುವೆಯೂ ಒಬ್ಬ ಸಾಹಿತಿಗಾಗಿ, ಕಾದಂಬರಿಕಕಾರರಾಗಿ ರೂಪಗೊಂಡಿದ್ದು ವಿಶೇಷ ಹೋರಾಟ, ಸೆರೆವಾಸ, ಕಷ್ಟ ಸಂಕಟಗಳ ನಡುವೆಯೂ ಗೊರೂರಲ್ಲಿ ಅಡಗಿದ್ದ ಸೃಜನಶೀಲ ಸಾಹಿತಿ ತನ್ನ ಸಾಹಿತ್ಯ ಕಾರ್ಯವನ್ನು ನೆರವೇರಿಸಿಕೊಂಡು ಬಂದಿದ್ದಾರೆ. ೧೯೫೨ ರಲ್ಲಿ ವಿಧಾನ ಪರಿಷತ್ತಿಗೆ ಎರಡು ಬಾರಿ ನಾಮಕರಣ ಮಾಡಿ ಸರ್ಕಾರದಕ್ಕೆ ತನ್ನ ಗೌರವ ಕೃತಜ್ಞತೆಗಳನ್ನು ತೋರಿತು. ಸಾಹಿತ್ಯ ಲೋಕವು ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ (೧೯೭೧), ಅಖಿಲ ಕರ್ನಾಟಕ ಜಾನಪದ ಸಮ್ಮೇಳನ ಅಧ್ಯಕ್ಷತೆ (೧೯೮೨), ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೮೦) ಗೌರವ ಡಾಕ್ಟೊರೇಟ್ ಪ್ರಶಸ್ತಿ (೧೯೭೪) ಗಳ ಮೂಲಕ ಗೌರವಿಸಿತು.

ಗೊರೂರು ೧೯೯೧ ರ ಸೆಪ್ಟೆಂಬರ್ ೨೮ ರಂದು ತೀರಿಕೊಂಡರು. ಸರ್ಕಾರಿ ಗೌರವಗಳೊಂದಿಗೆ ಅವರ ಅಂತ್ಯಕ್ರಿಯೆ ನಡೆಯಿತು. ಸ್ವಾತಂತ್ರ್ಯ ಇತಿಹಾಸದಲ್ಲಿ, ಸಾಹಿತ್ಯಹಾಸದಲ್ಲಿ ಅವರು ಅಮರರಾದರು.

**ಗೊರೂರು ರಾಮಸ್ವಾಮಿ ಅಯ್ಯಂಗಾರರ ಬರಹ**

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಸಾಹಿತ್ಯ ಸೃಷ್ಟಿ ಸಮೃದ್ಧವಾದುದು. ಅವರು ಪ್ರಬಂಧ, ಕಥೆ, ಕಾದಂಬರಿ, ಪ್ರವಾಸ ಕಥನ, ವಿಮರ್ಶೆ ಜೀವನ ಚಿತ್ರ ಭಾಷಾಂತರ ವ್ಯಕ್ತಿ ಹಾಗೆ ಹಲವು ಸಾಹಿತ್ಯ ಕೃಷಿ ಸಾಕಷ್ಟು ಎನ್ನಬಹದು ಆದರೂ ಗೊರೂರು ಸಿದ್ಧಿ, ಪ್ರಸಿದ್ಧಿಗಳಿಗೆ ಮುಖ್ಯವಾದ ಆಧಾರ ಅವರ ಪ್ರಬಂಧಗಳು. ಅವು ದಶಕಗಳಿಂದ ಕನ್ನಡಿಗರಿಗೆ ಶುದ್ಧ ಸಂತೋಷ ಸಾಹಿತ್ಯವೆನಿಸಿವೆ. ಇಂದಿಗೂ

ಅವುಗಳ ಸ್ವಾರಸ್ಯ ಬತ್ತಿಲ್ಲ. ತಮ್ಮ ಪ್ರಬಂಧ ಸಾಹಿತ್ಯದಿಂದ ನಾಡನ್ನು ನಗಿಸಿ ನಲಿಸಿದ್ದಾರೆ. ಗೊರೂರರದು ಹಾಸ್ಯಯೋಗ ಸಾಹಿತ್ಯ.

ಗೊರೂರರ ಒಟ್ಟು ಸಾಹಿತ್ಯವನ್ನು ನಾವು

೧. ಕಥ ಪ್ರಬಂಧ ವಿನೋಧ ಕಥೆ

೨. ಕಾದಂಬರಿಗಳು

೩. ಜೀವನ ಚಿತ್ರಗಳು

೪. ಪ್ರವಾಸ ಕಥೆಗಳು

೫. ಅನುವಾದಗಳು

೬. ಜಾನಪದ

ಗೊರೂರು ಸಾಹಿತ್ಯ ವಾಸ್ತವವಾಗಿ ಹೀಗೆ ವರ್ಗಿಕರಿಸಿಕೊಳ್ಳುವುದು ಆರಂಭವಾದುದು ಪತ್ರಿಕಾ ಲೇಖನಗಳಿಂದ ಅವರ ಮೊದಲ ಲೇಖನ "ಸಾಧ್ವಿ" ಪತ್ರಿಕೆಯಲ್ಲಿ ಪ್ರಕಟವಾಯಿತ್ತು ಜಯ ಕರ್ನಾಟಕ ಮಾಸಪತ್ರಿಕೆಗಳಿಗೆ ಬರೆದ ಲೇಖನಗಳು ನಾಡಿನ ಹಿತಕ್ಕೆ ಸಂಬಂಧಿಸಿದವು. ಜೊತೆಗೆ 'ಗ್ರಾಮೋಧ್ಯೋಗ ಪತ್ರಿಕೆ' ಯಲ್ಲಿನ ಲೇಖನಗಳನ್ನು ಅನುವಾದಿಸಿ ಕನ್ನಡದ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು.

ಗೊರೂರರ ಬರವಣಿಗೆಯಲ್ಲಿ ಯಾವುದೇ ತಂತ್ರದ ಪ್ರಯೋಗವಾಗಲಿ, ಸಂಕೇತ ಪ್ರತೀಕ ಪ್ರತಿಮೆಗಳ ನಿರ್ಮಾಣವಾಗಲಿ ಅವರ ಕೃತಿಗಳಲ್ಲಿ ಗೋಚರಿಸುವುದಿಲ್ಲ. ತಾವು ಕಂಡುದ್ದನ್ನು ಗೊರೂರರು ಸಹಜವಾಗಿ, ಸಲೀಸಾಗಿ ಆಕರ್ಷಕವಾಗಿ ಹೇಳಿಕೊಂಡು ಹೋಗುತ್ತಾರೆ.

ಉಸುಬು, ಕತೆಗಳು ಮತ್ತು ವಿನೋದ ಚಿತ್ರಗಳು, ಕಮ್ಮಾರ ವೀರಭದ್ರಾಚಾರಿ, ಗರುಡ ಗಂಬರದ ದಾಸಯ್ಯ, ಗೋಪುರದ ಬಾಗಿಲು, ನಮ್ಮ ಊರಿನ ರಸಿಕ, ಬೆಸ್ತರ ಕರಿಯ, ಬೈಲಹಳ್ಳಿಯ ಸರ್ವೆ ಎಂಬಪ್ರಬಂಧ ಮರೆಯಾದ ಮಾರಮ್ಮ, ವೈಯಾರಿ, ಶಿವರಾತಿ ಹಳ್ಳಿಯ ಚಿತ್ರಗಳು ಕಥಾ ಸಂಕಲನಗಳು.

ಊರ್ವಶಿ, ಪುನರ್ಜನ್ಮ, ಮೆರವಣಿಗೆ, ಹೇಮಾವತಿ, ಅಮೇರಿಕಾದಲ್ಲಿ ಗೊರೂರು (೧೯೮೨), ಮಹಾತ್ಮಗಾಂಧೀಯವರ ದಕ್ಷಿಣಯಾತ್ರೆ (೧೯೪೯) ಎಂಬ ಪ್ರವಾಸ ಸಾಹಿತ್ಯ ಗ್ರಂಥ ಕುಮಾರವ್ಯಾಸ ಭಾರತದ ಸ್ತ್ರೀಪಾತ್ರಗಳು, ರಸಫಲ, ಸಾಹಿತ್ಯರಶ್ಮಿ, ಎಂಬ ವಿಮರ್ಶಾತ್ಮಕ ಕೃತಿಗಳು.

ಜಾನಪದ ಜೀವನ ಮತ್ತು ದರ್ಶನ, ಹಳ್ಳಿಯ ಬಾಳು, ಹಳ್ಳಿಯ ಹಾಡುಗಳು ಎಂಬ ಜಾನಪದ ಗ್ರಂಥಗಳು.

ಜಗತ್ತಿನ ಮಹತ್ವದ ವ್ಯಕ್ತಿಗಳು, ಭಾರತದ ಭಾಗ್ಯವಿಧಾತ, ಮೌಲಾನಾ ಅಬ್ದುಲ್‌ಕಲಮ್ ಆಜಾದ್, ಸತಿ ಕಸ್ತೂರಿ ಬಾ ಎಂಬ ಜೀವನ ಚಿತ್ರಗಳು.

ಹೇಮಾವತಿ ಮತ್ತು ಇತರ ಪ್ರಬಂಧ, ಬೆಟ್ಟದ ಮನೆಯಲಿ ಮತ್ತು ಇತರ ಪ್ರಬಂಧ ಹಾಗೂ ಹಳೆಯಪಳೆಯ ಮುಖಗಳು ಎಂಬ ಪ್ರಬಂಧ ಸಂಕಲನಗಳು.

ಮಹಾತ್ಮ ಗಾಂಧೀಜಿಯವರ ಹಾಸ್ಯ ಪ್ರವೃತ್ತಿ ಮತ್ತು ಇತರ ಲೇಖನಗಳು, ಹೊಸಗನ್ನಡ ಪ್ರಬಂಧ ಸಂಕಲನ ಎಂಬ ಸಂಕೀರ್ಣ ಕೃತಿಗಳು.

ಗೊರೂರು ಕೃತಿಗಳು ಅಲ್ಲಿನ ಸಾಂಸ್ಕೃತಿಕ ಜೀವನದ ವಿವಿಧ ಮುಖಗಳಿಗೆ ಹಿಡಿದ ಕನ್ನಡಿಯಾಗಿವೆ. ಹೇಮಾವತಿ ನದಿ ತೀರದ ಬದುಕು ಮತ್ತು ಗೊರೂರು ಗ್ರಾಮದ ಸುತ್ತಮುತ್ತಲಿನ ಸಮೃದ್ಧ ಗ್ರಾಮೀಣ ಜೀವನದ ಚಿತ್ರಣ ಇವರ ಕೃತಿಗಳಲ್ಲಿ ಹೆಚ್ಚು ಹಾಸುಹೊಕ್ಕಾಗಿದೆ ಅಂದರೆ ಜೀವನ ಮತ್ತು ಸಾಹಿತ್ಯಗಳ ಸುಮಧುರವಾಗಿ ಅನಾವರಣಗೊಂಡಿದೆ.

**ಎ.ಎನ್.ಮೂರ್ತಿರಾವ್ ಅವರ ಬದುಕು**

ಅಕ್ಕಿಹೆಬ್ಬಾಳು ನರಸಿಂಹಮೂರ್ತಿರಾಯರು ಕರ್ನಾಟಕದ ಅತ್ಯಂತ ಹಿರಿಯ ಬರಹಗಾರರಲ್ಲಿ ಒಬ್ಬರು. ವೃತ್ತಿಯಲ್ಲಿ ಇಂಗ್ಲೀಷ್ ಪ್ರೋಫೆಸರ್ ಆಗಿದ್ದರು. ಆದರೆ ಅವರು ಬರೆದದ್ದು ಕನ್ನಡ ಭಾಷೆಯಲ್ಲಿ ಕನ್ನಡ ಪ್ರಬಂಧಕಾರ, ವಿಮರ್ಶಕ ಪತ್ರಕರ್ತ,ಅನುವಾದಕ ಎಂದು ಹಲವಾರು ಪಟಗಳನ್ನು ಸಂತೋಷದಿಂದ ಹಚ್ಚಬಹುದಾದ ವ್ಯಕ್ತಿಯಾಗಿದ್ದಾರೆ.

ಅಕ್ಕಿಹೆಬ್ಬಾಳು ನರಸಿಂಹಮೂರ್ತಿರಾಯರು ೧೯-೦೯-೧೯೦೦ ರಲ್ಲಿ ಜನಿಸಿದರು. ಅಕ್ಕಿಹೆಬ್ಬಾಳು ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಒಂದು ಹಳ್ಳಿ ಮೂರ್ತಿರಾಯರು ಮಾಧ್ಯಮಿಕ ಶಾಲೆಯವರೆಗೆ ಅಕ್ಕಿಹೆಬ್ಬಾಳಿನಲ್ಲೇ ಅಧ್ಯಯನ ಮಾಡಿ, ಮೈಸೂರಿನ ವೆಸ್ಲಿಯನ್ ಮಿಷನ್ ಶಾಲೆಯಲ್ಲಿ ಪ್ರೌಢಶಾಲೆ ಮುಗಿಸಿ, ಮಹಾರಾಜ ಕಾಲೇಜಿನಲ್ಲಿ ಇಂಗ್ಲೀಷ್ ಎಂ.ಎ. ಪದವಿಯನ್ನು ಪಡೆದರು. ಆನಂತರ ಅವರು ಮಹಾರಾಜ ಕಾಲೇಜಿನಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ನಂತರ ಅನೇಕ ಸರಕಾರಿ ಇಂಟರ್ ಮೀಡಿಯೆಟ್ ಕಾಲೇಜುಗಳಲ್ಲಿ ಆಂಗ್ಲ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

ಮೈಸೂರಿನ ಮಹಾರಾಜ ಕಾಲೇಜು ಮೂರ್ತಿರಾಯರು ಜೀವನದಲ್ಲಿ ಒಂದು ಮಹತ್ತರ ಪಾತ್ರವಹಿಸಿದೆ. ಮೂರ್ತಿರಾಯರ ಸಾಹಿತ್ಯ ಸೃಷ್ಠಿ ಆರಂಭವಾದದ್ದು ಇದೇ ಹಂತದಲ್ಲಿ, ಅವರು ಫ್ರೆಂಚ್ ಭಾಷೆಯನ್ನು ಕಲಿತ್ತಿದ್ದರು. ಸುಪ್ರಸಿದ್ದ ಫ್ರೆಂಚ್ ನಾಟಕ ಕರ್ತ ಮೊಲಿಯೇರಿನ' ತಾರ್ತುಫ್ ನಾಟಕವನ್ನು

೧೯೨೧ರಲಿ 'ಆಷಾಡಭೂತಿ' ಎಂಬ ಹೆಸರಿನಿಂದ ಕನ್ನಡಕ್ಕೆ ರೂಪಾಂತರಿಸಿದ್ದರು. ಇದು ಮೂರ್ತಿರಾಯರ ಸಾಹಿತ್ಯ ಸೃಷ್ಟಿಯ ಮೊದಲ ಪ್ರಯತ್ನವಾಯಿತು. ೧೯೮೪ ರಲ್ಲಿ ಕುವೆಂಪುರವರ ಯಮನಸೋಲು ಮತ್ತು ಮೂರ್ತಿರಾಯರ ಆಷಾಡಭೂತಿ ನಾಟಕವನ್ನು ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮೂರ್ತಿರಾಯರು ಅಧ್ಯಕ್ಷರಾಗಿದ್ದಾಗ ಪ್ರದರ್ಶನ ಮಾಡಲಾಯಿತು. ಈ ನಾಟಕವನ್ನು ಆಧರಿಸಿದ ಚಲನಚಿತ್ರ "ಸುಬ್ಬಶಾಸ್ತ್ರಿ" ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯವೂ ಆಯಿತು.

ಟಿ.ಆರ್.ಕಸ್ತೂರಿರಂಗಚಾರ್ಯರ ಪ್ರಭಾವದಿಂದ ಮೂರ್ತಿರಾಯರಿಗೆ ಸಂಸ್ಕೃತ ಸಾಹಿತ್ಯವು ಕರಗತವಾಯಿತು. ಮಾತ್ರವಲ್ಲದೇ ಸಂಸ್ಕೃತ ಸಾಹಿತ್ಯವು ಕರಗತವಾಯಿತು. ಮಾತ್ರವಲ್ಲದೆ ಸಂಸ್ಕೃತ ಭಾಷೆಯಲ್ಲಿ ಪದ್ಯರಚನೆ ಮಾಡುವ ಸಾಮರ್ಥ್ಯ ಹಾಗೂ ಪ್ರತಿಭೆ ಪಡೆದರು. ೧೯೪೯ರಲ್ಲಿ ಮೂರ್ತಿರಾಯರಿಗೆ ಬೆಂಗಳೂರಿಗೆ ವರ್ಗವಾಯಿತು. ರಾಮಕೃಷ್ಣಾಶ್ರಮ ಪ್ರಕಟಿಸಿದ ಸಂಸ್ಕೃತದ ಮೂಲದ ಮತ್ತು ಪ್ರತಿ ಪದಾರ್ಥ ಸಹಿತವಿರುವ ಉಪನಿಷತ್ತುಗಳನ್ನು ಅಲ್ಲಿ ಅವರು ಅಧ್ಯಯನ ಮಾಡಿದರು. ಮೂರ್ತಿರಾಯರ ಜೀವನದ ಮೇಲೆ ಉಪನಿಷತ್ತುಗಳು ಪ್ರಭಾವ ಬೀರಲು ಈ ಅಧ್ಯಯನವೇ ಕಾರಣವಾಯಿತು.

೧೯೪೨ ರಲ್ಲಿ ಮೂರ್ತಿರಾಯರ ಜೀವನದಲ್ಲಿ ಮತ್ತೊಂದು ಅಧ್ಯಾಯ ಆರಂಭವಾಯಿತು. ಅವರು ಮೈಸೂರು ಆಕಾಶವಾಣಿಯ ಅಸಿಸ್ಟೆಂಟ್ ಸ್ಟೇಷನ್ ಸೂಪರಿಟೆಂಡೆಂಟ್ ಆಗಿ ನೇಮಕವಾಗಿದ್ದರು. ಇದರ ಜೊತೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಅಧ್ಯಕ್ಷರಾಗಿ ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಹಲವಾರು ಹಂತಗಳಲ್ಲಿ ಆಡಳಿತದ ಅನುಭವವನ್ನು ಪಡೆದುಕೊಂಡರು.

ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಮೂರ್ತಿರಾಯರು ಕನ್ನಡ ಸಲಹಾ ಸಮಿತಿಯವರು, ಛೇರ್ಮನ್ ಆಗಿ ಕೆಲಸ ಮಾಡಿದರು. ೧೯೮೪ ರಲ್ಲಿ ಕೈವಾರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಗೆ ಆಯ್ಕೆಯಾದ ಮೂರ್ತಿರಾಯರು ಕನ್ನಡ ಸಾಹಿತ್ಯ ಪ್ರೇಮಿಗಳಗೆ ಪ್ರೀತಿ ಆದರಗಳಿಗೆ ಪಾತ್ರರಾಗಿದ್ದರು. ಮೂರ್ತಿರಾಯರಿಗೆ ಮೈಸೂರು ವಿಶ್ವವಿದ್ಯಾಲಯ ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದೆ.

ಮೂರ್ತಿರಾಯರು ವೃತ್ತಿಯಿಂದ ನಿವೃತ್ತರಾಗಿದ್ದರೂ ಪ್ರವೃತ್ತಿಯಿಂದ ನಿವೃತರಾಗಿರಲಿಲ್ಲ. ಬದುಕಿನ ಕೊನೆಯ ಕೆಲವು ವರ್ಷಗಳನ್ನು ಬಿಟ್ಟು ಉಳಿದಂತೆ ಅವರು ಬಹುಕಾಲ ಬರವಣಿಗೆಯಲ್ಲಿ ತೊಡಗಿಸಿಕೊಂಡರು.

**ಎ.ಎಸ್.ಮೂರ್ತಿರಾಯರ ಬರಹ :**

ಎ.ಎನ್.ಮೂರ್ತಿರಾಯರ ಬರವಣಿಗೆಗೂ, ವ್ಯಕ್ತಿತ್ವಕ್ಕೂ ಅವಿನಾಭಾವ ಸಂಬಂಧವನ್ನು ಕಲ್ಪಿಸುತ್ತದೆ. ಅವರ ಹರಟೆಯ ಗುಣ ಅವರ ತಾರುಣ್ಯದಿಂದ ಹಿಡಿದು ಇಂದಿನವರೆಗೆ ಸ್ನೇಹಿತರ ವಲಯದಲ್ಲಿ ಸಾಹಿತ್ಯಪರವಾದ ಮತ್ತು ಜೀವನ ಪರವಾದ ಚರ್ಚೆಗಳು ಬರುತ್ತವೆ.

ಧಾರವಾಡದ 'ಗೆಳೆಯರ ಗುಂಪು' ವಿನಾಯಕ ,ಬೇಂದ್ರೆ, ಮಧುರಚೆನ್ನ, ರಂ.ಶ್ರೀ.ಮುಗಳಿ ಮೊದಲಾದ ಸಹೃದಯರು ವಿದ್ವತ್ ಗೋಷ್ಠಿಗಳಿಂದ ಶೋಭಿಸಿದ ಖಚಿತ ಧ್ಯೆಯೋದ್ದೇಶಗಳ ಸಾಹಿತ್ಯಕ ಗುಂಪಾಗಿದ್ದರು. ಮೈಸೂರಿನಲಲ್ಲಿ ತೀ.ನಂ.ಶ್ರೀ. ಡಿ.ಎಲ್.ನರಸಿಂಹಚಾರ್, ನಾ ಕಸ್ತೂರಿ ಕುವೆಂಪು, ಜಿ.ಹನುಮಂತರಾವ್, ಪು.ತಿ.ನ. ಗೊರೂರು ಮೊದಲಾದರೊಡನೆ ಕಟ್ಟಿಕೊಂಡ ಅನಧಿಕೃತ ತರುಣರ ಗುಂಪು ಅದೇ ಬಗೆಯ ಕೆಲಸವನ್ನು ಕೈಗೊಂಡು ಯಶಸ್ವಿಯಾದ ಇನ್ನೊಂದು ತಂಡ ಎನ್ನಬಹುದು. ವಿಷಯದಲ್ಲಿ ದೊಡ್ಡವರಾಗಿರುವಂತೆ ಸಾಹಿತ್ಯದ ಕ್ಷೇತ್ರದಲ್ಲಿಯೂ ದೊಡ್ಡವರಾಗಿರುವುದು ಮೂರ್ತಿರಾಯರ ವೈಶಿಷ್ಟ, ಮೂರ್ತಿರಾಯರ "ಚಿತ್ರಗಳು ಪತ್ರಗಳು" ಕಿರು ಬರಹಗಳಲ್ಲಿ ವ್ಯಕ್ತವಾಗುವಂತ ಈ ತರುಣರ ಗುಂಪಿನಲ್ಲಿ ಚರ್ಚೆಯ ವಿಷಯ ಕೂಡ ಕನ್ನಡ ಶಬ್ದಗಳ ಬಳಕೆಯನ್ನು ಕುರಿತ ಮುಕ್ತಿಚಿಂತನೆ, ಬರಹಗಳ ಅಣಕ ಮುಕ್ತ ಮನಸ್ಸಿನ ಹರಟೆಗಳೇ ಆಗಿದ್ದುವಂತೆ. ಹೀಗೆ ಮೂರ್ತಿರಾಯರು ಸದ್ದಿಲ್ಲದ ಕನ್ನಡ ಚಳುವಳಿ ಅದರ ಪ್ರದರ್ಶಾನಾರ್ಥದಲ್ಲಿ ಅಲ್ಲದೆ ಕ್ರಿಯಾತ್ಮಕ ಅರ್ಥದಲ್ಲಿ ಬೆಳೆದುಕೊಂಡು ಬಂದ ಬಗೆಯನ್ನು ತಮ್ಮ ಬರವಣಿಗೆಯಲ್ಲಿ ಕಾಣಿಸಿದ್ದಾರೆ.

ಮೂರ್ತಿರಾಯರ ಸಾಹಿತ್ಯ ಕೃತಿಗಳಲ್ಲಿ ವೈವಿಧ್ಯಮಯವಾದ ವಸ್ತು ಮತ್ತು ಪ್ರಕಾರಗಳಿಂದ ಕೂಡಿರುವಂತಹುದು ಅವರ ಸಾಹಿತ್ಯ ಸೃಷ್ಟಿ ಆರಂಭವಾದದ್ದು ಅನುವಾದದಿಂದಲೇ. ಆದರೂ ಪ್ರಬಂಧ ವಿಮರ್ಶೆ, ಶಿಶು ಸಾಹಿತ್ಯ, ತೌಲನಿಕ ಸಾಹಿತ್ಯ, ರೂಪಾಂತರ ವೈಚಾರಿಕ ಸಾಹಿತ್ಯ ಪ್ರಕಾರಗಳಿಗೆ ಅವರ ಕಾಣಿಕೆಗಳನ್ನು ನೀಡಿದ್ದಾರೆ. ಇದಲ್ಲದೇ ಅವರು ಹಲವರು ಇಂಗ್ಲೀಷ್ ಲೇಖನಗಳನ್ನು ಬರೆದಿದ್ದಾರೆ.

ಕನ್ನಡದಲ್ಲಿ ಅವರ ಲಲಿತ ಪ್ರಬಂಧಗಳಆಚಾರ್ಯರೇ ಆಗಿದ್ದಾರೆ, ಡಾ॥ಎ.ಎನ್.ಮೂರ್ತಿರಾಯರ ಬರವಣಿಗೆಯನ್ನು ಈ ರೀತಿ ವಿಂಗಡಿಸ ಬಹುದು.

೧. ಲಲಿತ ಪ್ರಬಂಧಗಳು – ಹಗಲುನಸುಗಳು ಅಲೆಯದ ಮನ ಮಿನುಗು ಮಿಂಚು.

೨. ಪ್ರವಾಸ ಕಥನ – ಅಪರ ವಯಸ್ಕರ ಅಮೆರಿಕಾ ಯಾತ್ರೆ ( ಕರ್ನಾಟಕ ರಾಜ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ).

೩. ವ್ಯಕ್ತಿಚಿತ್ರ ಪತ್ರ ಸಾಹಿತ್ಯ:– ಚಿತ್ರಗಳು ಪತ್ರಗಳು (ಕೇಂದ್ರ ಸಾಹಿತ್ಯ ಆಕಾಡಮಿ ಪ್ರಶಸ್ತಿ ದೊರಕಿದೆ).

೪. ಸಾಹಿತ್ಯ ವಿಮರ್ಶೆ :- ಷೇಕ್ಸ್‌ಪಿಯರ್, ಮಾಸ್ತಿಯವರ ಕಥೆಗಳು ಬಿ.ಎಂ.ಶ್ರೀಕಂಠಯ್ಯ, ಪೂರ್ವ ಸೂರಿಗಳೊಡನೆ, ಸಾಹಿತ್ಯ ಮತ್ತು ಸತ್ಯ, ವಿಮರ್ಶಾತ್ಮಕ ಪ್ರಬಂಧಗಳು.

೫. ಆತ್ಮಕಥೆ:- ಸಂಜೆಗಣ್ಣಿನ ಹಿನ್ನೋಟ.

೬. ರೂಪಾಂತರ -ಭಾಷಾಂತರ: ಆಷಾಡಭೂತಿ (ನಾಟಕ), ಮೋಲೀಯೇರನ ಎರಡು ನಾಟಕಗಳು, ಚಂಡಮಾರುತ, (ನಾಟಕ), ಸಾಕ್ರಟೀಸನ ಕೊನೆಯ ದಿನಗಳು, ಪಾಶ್ಚಾತ್ಯ ಸಣ್ಣಕಥೆಗಳು, ಯೋಧನ ಪುನರಾಗಮನ, ಅಮೇರಿಕನ್ ಸಾಹಿತ್ಯಗಳು ರಚಿಸಿದ್ದಾರೆ.

ಎ.ಎನ್.ಮೂರ್ತಿರಾವ್ ಅವರಿಗೆ ೧೯೭೭ ರಲ್ಲಿ ಮೈಸೂರು, ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಪ್ರಶಸ್ತಿ ಮತ್ತು ರಾಜ್ಯ ಸಾಹಿತ್ಯ ಆಕಾಡಮಿ ಪ್ರಶಸ್ತಿ ದೊರತಿದೆ. ದೇವರು ಕೃತಿಗೆ ೧೯೯೨ ರಲ್ಲಿ ಪಂಪ ಪ್ರಶಸ್ತಿ, ೧೯೯೮ ರಲ್ಲಿ ಗೊರೂರು ಪ್ರಶಸ್ತಿ, ೧೯೯೯ ರಲ್ಲಿ ಶಂಬಾ ಪ್ರಶಸ್ತಿ, ೨೦೦೦ ರಲ್ಲಿ ಹಂಪೆ ಕನ್ನಡ ವಿಶ್ವವಿದ್ಯಾನಿಲಯದ ನಾಡೋಜ ಪ್ರಶಸ್ತಿ ದೊರತಿದೆ. ೨೦೦೦ ರಲ್ಲಿ 'ಶತಯಷಿ' ಅಭಿನಂದನಗ್ರಂಥ ಇವರಿಗೆ ಸಮಾರ್ಪಣೆಯಾಯಿತು.

ಯಾವ ಧರ್ಮಕ್ಕೂ ಅಂಟಿಕೊಳ್ಳದೇ, ಎಲ್ಲ ಧರ್ಮಗಳಿಗೂ ಸೇರಿದ ಮೂರ್ತಿರಾಯರು ಜೀವನ ಸಾಹಿತ್ಯ ಸಾಧನೆಗಳು ನಮ್ಮ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುತ್ತದೆ. ಮೂರ್ತಿರಾಯರ ವೃತ್ತಿಯಿಂದ ಅಧ್ಯಾಪಕರು,ಪ್ರವೃತ್ತಿಯಿಂದ ಬರಹಗಾರರು, ಇವರ ಬದುಕು ಮತ್ತು ಬರಹ ನಾಣ್ಯದ ಎರಡು ಮುಖಗಳಂತೆ ಇವೆ.

ಅಧ್ಯಾಯ – ೪

# ಗೊರೂರು ರಾಮಸ್ವಾಮಿ ಅಯ್ಯಂಗಾರ್ ರವರ ಪ್ರಬಂಧ ಸಾಹಿತ್ಯ ಸ್ವರೂಪ

ಗ್ರಾಮೀಣ ಜಗತ್ತಿನ ಜನಪದದಿಂದ ಪ್ರೇರಣೆ ಪಡೆದು ಪ್ರಬಂಧಗಳನ್ನು ಬರೆದವರು ಪ್ರಮುಖ ಸಾಲಿನಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಒಬ್ಬರು. ಅವರ ಪ್ರತಿಭೆ ದೇಸೀಮೂಲವಾದುದು. ಗೊರೂರು ರವರ ಪ್ರಬಂಧ ಸಾಹಿತ್ಯದಲ್ಲಿ ಪ್ರಮುಖವಾದ ಕಾಳಜಿಗಳನ್ನು ಒಳಗೊಂಡಿದೆ. ಗೊರೂರು ಮತ್ತು ಹೇಮಾವತಿ ನದಿಯ ಸುತ್ತಮುತ್ತಲಿನ ಪರಿಸರದ ವರ್ಣನೆ. ಸರಳ ಭಾಷೆ ಹಾಗೂ ಅನುಭವಗಳ ಮೂಲಕ ಪ್ರಬಂಧವನ್ನು ಕಟ್ಟುವ ಪ್ರಯತ್ನದಲ್ಲಿ ಪ್ರಬಂಧಕಾರರಾದ ಗೊರೂರು ಯಶಸ್ವಿಯಾಗಿದ್ದಾರೆ.

ಗ್ರಾಮೀಣ ಪರಿಸರದಲ್ಲಿನ ಕೌಟುಂಬಿಕ ಚಿತ್ರಣ ಸಂಬಂಧಗಳು, ಹಳ್ಳಿಯ ಪರಿಸರ, ಮಾನವೀಯ ಸಂಬಂಧಗಳನ್ನು ಅನ್ವೇಷಿಸುತ್ತಾ ಗ್ರಾಮೀಣ ಸಂಸ್ಕೃತಿಯ ದಟ್ಟವಾದ ವರ್ಣನೆಯೇ ಪ್ರಬಂಧ ಮೂಲವಾಗಿರುತ್ತದೆ. ಸಮಾಜದ ವಾಸ್ತವ ದುರಂತಗಳನ್ನು ಗಮನಿಸುವ ಮನುಷ್ಯನ ಮೂಲಭೂತ ಒಳ್ಳೆತನದ ಹಾಗೂ ನೈತಿಕತೆಗಳನ್ನು ಎತ್ತಿಹಿಡಿದಿರುವುದು ಇವರ ಪ್ರಬಂಧಗಳಲ್ಲಿ ಕಂಡು ಬರುತ್ತದೆ. ಇವರ ಬರವಣಿಗೆಗಳು ಭಾಷೆಯಲ್ಲಿ ಸರಳವಾದರೂ ಅದರಲ್ಲಿ ವಿಡಂಬನೆ ಮತ್ತು ವ್ಯಂಗ್ಯಗಳು ತುಂಬಿಕೊಂಡಿದೆ.

ಗೊರೂರು ಹಾಸ್ಯ ಬರಹಗಾರರಾಗಿಯೂ ಪ್ರಥಮ ಪಂಕ್ತಿಯಲ್ಲಿದ್ದಾರೆ. ಹಾಸ್ಯದ ಮೂಲಕ ಸಮಾದ ವ್ಯಕ್ತಿಯು ವಿಡಂಬನೆಯನ್ನು ಮಾಡಿಗೆಲ್ಲುವುದು ಕಷ್ಟ ಆದರೆ ಗೊರೂರು ಈ ಕ್ರಿಯೆಯಲ್ಲಿ ಯಶಸ್ವಿಯಾಗಿದ್ದಾರೆ. ಇವರ ಮೇಲೆ ಪ್ರಭಾವ ಪ್ರೇರಣೆ ನೀಡಿದವುಗಳೆಂದರೆ ಒಂದು ಅವರ ಊರು ಗೊರೂರು. ಮತ್ತೊಂದು ಗಾಂಧೀಜೀಯವರ ಆದರ್ಶಗಳು ಇವರೆಡೂ ಅವರ ಬದುಕು ಮತ್ತು ಬರಹಗಳಲ್ಲಿ ಪ್ರತಿಫಲಿತವಾಗಿವೆ.

ಗೊರೂರರ ಕಥೆ ಕಾದಂಬರಿಗಳಿಗೆ ಸ್ಫೂರ್ತಿ ನೀಡಿದ ಗ್ರಾಮೀಣ ಬದುಕು ಅವರ ಪ್ರಬಂಧದ ರಚನೆಯಲ್ಲೂ ಸೆಲೆಯಾಗಿದೆ.

ಗೊರೂರು ತಮ್ಮ ಪ್ರಬಂಧಗಳನ್ನು ತಮ್ಮ ಅನುಭವದ ನೆಲೆಗಟ್ಟಿನ ಮೇಲೆ ರಚಿಸಿರುವುದು ವಿಶೇಷ.

ಬೆಟ್ಟದ ಮನೆಯಲ್ಲಿ ಪ್ರಬಂಧದಲ್ಲಿ ಪರಿಸರದಲ್ಲಿನ ಸಾಹಸ ಪ್ರಿಯತೆಯನ್ನು ಚಿತ್ರಿಸುತ್ತದೆ. ಮಾಸಹಾಸ ಎಂದು ಕೂಗುವ ಕುಳಿಂಗ ಪಕ್ಷಿ ಹುಲಿ ಸಿಂಹಗಳ ಹಲ್ಲಿನ ನಡುವಿನ ಮಾಂಸವನ್ನು ಹೆಕ್ಕಿ ತಿನ್ನುತ್ತದೆ ಎಂಬ ಪ್ರಸ್ತಾವನೆಯಿಂದ ಪ್ರಾರಂಭವಾಗುವ ಈ ಪ್ರಬಂಧ ಹೇಮಾವತಿಗೆ ೨೦ ಮೈಲಿ ದೂರದಲ್ಲಿ ಹಿಂದಿನ ಕಾಲದಲ್ಲಿ ರಚನೆಯಾದ ಅಣೆಕಟ್ಟನ್ನು ಅದು ಅರ್ಧದಲ್ಲಿ ಕಾರ್ಯವನ್ನು ಸ್ಥಗಿತಗೊಳಿಸಿರುವ ಬಗೆ ಮತ್ತು ಅದಕ್ಕೂ ಮೊದಲೆ ಬೆಟ್ಟದ ಮೇಲೆನ ಸುಮಾರು ೨ ಸಾವಿರ ಅಡಿಗಳ ಎತ್ತರವಿರುವ ಬೆಟ್ಟದ ಮೇಲಿನ ಮನೆಯ ನಿರ್ಮಾಣದಲ್ಲಿನ ಸಾಹಸಿಗರ ಎದೆಗಾರಿಕೆಯನ್ನು ವರ್ಣಿಸುತ್ತದೆ.

ಗೊರೂರು ಈ ಪ್ರಬಂಧ ಮನುಷ್ಯನ ಸಾಹಸಗುಣವನ್ನು.

[೧] 'ಮನುಷ್ಯನ ಸ್ವಭಾವದಲ್ಲಿ ಸಾಹಸ ಮಾಡುವುದು. ಹುಟ್ಟುಗುಣವಾದುದರಿಂದ ಮನುಷ್ಯ ಜಗತ್ತು ಹುಟ್ಟಿನಿಂದ ಇಂದಿನವರೆಗೆ ಸಾಹಸ ಮಾಡುತ್ತಲೆ ಬಂದಿದ್ದಾನೆ.

ಪ್ರಕೃತಿಯನ್ನು ಪ್ರವೇಶ ಮಾಡುವುದಕ್ಕೆ ಮನುಷ್ಯನಿಗೆ ಇಂತಹ ಗುಣಗಳನ್ನು ಹೊಂದಿರಬೇಕು ಎಂದು ಪ್ರಬಂಧಕಾರರು ಹೇಳುತ್ತಿದ್ದಾರೆ. ನಿರ್ಜನವಾದ ಬೆಟ್ಟದ ಮೇಲೆ ಮನೆಯನ್ನು ಮಾಡಿಕೊಂಡು ಅವರು ತಮ್ಮ ಕೆಲಸದ ಮೇಲೆ ಬಿದಿರು ಕಡಿಸಬೇಕಾದ ಸಂದರ್ಭದಲ್ಲಿ ಅವರು ಮಾಡಿದ ಸಾಹಸದ ವರ್ಣನೆಯನ್ನು ಕಲ್ಪನಾತ್ಮಕವಾಗಿ ಹೇಳಿದ್ದಾರೆ.

ಆ ಬೆಟ್ಟದ ಮನೆಗೆ ಹೋಗಬೇಕಾದರೆ ನಮಗೆ ದಾರಿಯಾವುದು ಎಂದು ಹೇಳಲು ಮೊದಲು ಮಾಡಿದ ಪ್ರಬಂಧಕಾರರು ಅಲ್ಲಿನ ಪ್ರಕೃತಿಯ ಗಂಭೀರತೆಯನ್ನು ವರ್ಣಿಸುತ್ತಾರೆ.

'ಜಾತ್ರೆ' ಈ ಪ್ರಬಂಧವೂ ಸಾಂಪ್ರದಾಯಿಕ ಪ್ರತೀಕವಾಗಿದೆ ಒಂದು ಹಳ್ಳಿಗೆ ಮಾತ್ರ ಸೀಮಿತವಾಗಿರದೆ ಹಲವಾರು ಹಳ್ಳಿಗಳು ಒಂದೂಗೂಡಿ ಮಾಡುವ ಸಡಗರ ಸಂಭ್ರಮವಾಗಿದೆ. ಯಾವುದೇ ಒಂದು ಜಾತಿ ವರ್ಗ ಪಂಗಡ ಎಂಬ ಭೇದ ಭಾವವಿಲ್ಲದೆ ಎಲ್ಲಾರೂ ಒಂದೇ ಕುಟುಂಬದವರಂತೆ ಒಂದು ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಈ ಜಾತ್ರೆಯ ಪ್ರಮುಖ ಪಾತ್ರವಹಿಸುವ ನರಸಿಂಹಸ್ವಾಮಿಯ ಪ್ರಭಾವ ಎಷ್ಟರ ಮಟ್ಟಿಗೆ ಇದೆ ಎಂದರೆ,

---

ಅಡಿಟಿಪ್ಪಣಿ

೧ ಬೆಟ್ಟದ ಮನೆ ಮತ್ತು ಇತರ ಪ್ರಬಂಧ ಸಂಕಲನ. ಪುಟ ಸಂಖೆ .೧

ಗೊರೂರರು ರಾಮಸ್ವಾಮಿ ಅಯ್ಯಂಗಾರ್

[೧] 'ನಮ್ಮ ದೇವರು ಸುತ್ತಲು ಅರವತ್ತು ಹಳ್ಳಿಗೆ ದೇವರಾದುದರಿಂದಲೂ ಇತರ ಎಲ್ಲಾ ದೇವರಗಿಂತಲೂ ನಮ್ಮೂರು ದೇವರು ಸತ್ಯ ಹೆಚ್ಚಾದುರದರಿಂದಲೂ ಇತರ ಎಲ್ಲಾ ದೇವರಿಗಿಂತಲೂ ನಮ್ಮೂರಲಿ ಮಾತ್ರ ಜಾತ್ರೆ (ತೇರು) ನಡೆಯುವುದರಿಂದಲೂ ಆ ಹಳ್ಳಿಗಳಿಗೂ ನಮ್ಮೂರ ನರಸಿಂಹಸ್ವಾಮಿಯೇ ಕುಲದೇವರು.

ಜಾತ್ರೆಯ ಪ್ರಾರಂಭವಾದ ದಿನದಿಂದ ೧೦ ದಿನಗಳ ಕಾಲ ನಡೆಯುವ ಈ ಜಾತ್ರೆಗೆ ಒಂದು ದಿನ ಒಂದು ಆಚಾರಣೆಯನ್ನು ಮಾಡಲಾಗುತ್ತದೆ ಈ ಆಚಾರಣೆಯಲ್ಲಿ ಒಂದೊಂದು ದಿನ ಜನಾಂಗದವರು ತಮ್ಮ ಕೆಲಸ ಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಾರೆ. ಕೊನೆಯ ದಿನವು ಎಲ್ಲಾ ಸೇರಿ ತೇರನ್ನು ಸಿಂಗರಿಸಿಕೊಂಡು ತಮ್ಮ ಹರಕೆ ಕಾಣಿಕೆಗಳನ್ನು ಸಲ್ಲಿಸುವ ಮೂಲಕ ದೇವರನ್ನು ಭಕ್ತಿಪೂರ್ವಕವಾಗಿ ಪ್ರಾರ್ಥನೆಯನ್ನು ಮಾಡಿಕೊಳ್ಳುತ್ತಾರೆ. ತೇರು ಎನ್ನುವುದು ಎಷ್ಟರಮಟ್ಟಿಗೆ ಅದರ ಪ್ರಭಾವ ಎಂದರೆ,

"ತೇರು ನಮ್ಮ ಊರಿಗೂ ನಮ್ಮ ಸುತ್ತಲ ನಾಡಿಗೂ ಸಾರ್ವಜನಿಕವಾದ ದೊಡ್ಡ ರಾಷ್ಟ್ರೀಯ ಹಬ್ಬ ನಮ್ಮ ರೈತರು ತೇರಿಗೂ ಜಾತ್ರೆಗೂ ಒಂದು ವ್ಯತ್ಯಾಸವನ್ನು ಇಟ್ಟಿದ್ದಾರೆ. ಎಲ್ಲಾ ತೇರಬರಿಯ ಬ್ರಾಹ್ಮಣರ ಸ್ವತ್ತು ಮಾತ್ರವಾಗಿರದೇ ಗ್ರಾಮದ ಮತ್ತು ಪ್ರಾಂತ್ಯದ ಎಲ್ಲಾ ಜನರಿಗೂ, ಅದರಲ್ಲಿ ಭಾಗವೂ ಉತ್ಸಾಹವು ಇರುವುವೋ ಅದು ಜಾತ್ರೆ.

ಒಟ್ಟಾರೇಯಾಗಿ ಈ ಪ್ರಬಂಧದಲ್ಲಿ ಸಮಾಜದಲ್ಲಿನ ಒಂದು ಸಾಂಪ್ರಾದಾಯಿಕ ಆಚರಣೆಯನ್ನು ಎಲ್ಲಾರು ಇದನ್ನು ಒಂದು ರಾಷ್ಟ್ರೀಯ ಹಬ್ಬ ಎಂದು ಭಾವಿಸಿರುವುದು. ಇಂತಹ ಜಾತ್ರೆಗಳು ನಡೆಯುವುದರಿಂದ ಸಮಾಜದಲ್ಲಿನ ಜನರಲ್ಲಿನ ಸೌಹರ್ದತೆಯನ್ನು ನೋಡಲು ಸಹಾಯವಾಗುತ್ತದೆ.

ಜಾತ್ರೆಯ ವರ್ಣನೆಯನ್ನು ಕುರಿತು ಪ್ರಬಂಧಕಾರರು ಈ ರೀತಿ ವರ್ಣಿಸಿದ್ದಾರೆ. ಬೆಳದಿಂಗಳ ರಾತ್ರಿಯಲ್ಲಿ ರಮಣಿಯರು ಬಿಟ್ಟ ರಂಗವಲ್ಲಿ ಬೀದಿಗೆಲ್ಲಾ ಮಲ್ಲಿಗೆ ಹೂವುಗಳನ್ನು ಹಾಸಿದಂತೆ ತೋರುತ್ತದೆ ಯಂತೆ ಜಾತ್ರೆಯ ಸಮಯದಲ್ಲಿ ಊರಿನಲ್ಲಿ ಚಲಿಸುತ್ತಿರುವ ತೇರಿನ ಉತ್ಸವವನ್ನು ಚಿತ್ರಿಸುತ್ತದೆ. ಊರಿಗೆ ಊರೇ ಅಲಂಕೃತವಾದ ಹಡಗಿನಂತೆ ತೋರುವುದು ಎಂದು ಹೇಳುತ್ತಾರೆ.

---

ಅಡಿಟಿಪ್ಪಣಿ

೧. ಬೆಟ್ಟದ ಮನೆ ಮತ್ತು ಇತರ ಪ್ರಬಂಧ ಸಂಕಲನ.ಪುಟ ಸಂಖೆ .೯೧,
ಗೊರೂರರು ರಾಮಸ್ವಾಮಿ ಅಯ್ಯಂಗಾರ್

ರಾತ್ರಿಯ ಉತ್ಸವ ಸಮಯದಲ್ಲಿ ಬಾಗಿಲಿನಲ್ಲಿ ಹೆಣ್ಣುಮಕ್ಕಳು ದೀಪದ ತಟ್ಟೆಗಳನ್ನು ಹಿಡಿದುಕೊಂಡು ತಲ್ಲೀನವಾಗಿ ಉತ್ಸವಗಳನ್ನು ನೋಡುವಾಗ ಆ ದೀಪಗಳ ಹಿಂದೆ ನಿನಗಿಂತ ನಾನೆ ಹೆಚ್ಚು ಕಾಂತಿ ಎನ್ನುವ ಪ್ರಮೆದೆಯರು ಮುಖ ಜ್ಯೋತಿ ಕಾಣಿಸುತ್ತಿದ್ದವಂತೆ.

'ಮಲ್ಲಿಗೆಹಳ್ಳಿಯಲ್ಲಿ ಬಯಲಾಟ ಪ್ರಬಂಧವೂ ಒಂದು ಹಳ್ಳಿಯ ಮನೋರಂಜನೆಯ ವಸ್ತುವಾಗಿದೆ. ಜನಪದ ಸಂಸ್ಕೃತಿಯ ಅವಿಭಾಗ್ಯ ಅಂಗವಾದ ಮನೋರಂಜನೆಗೆ ಬಹಳಷ್ಟು ಮಹತ್ವ ಇದೆ. ಇದರಲ್ಲಿ ಬಯಲಾಟ ಪ್ರಮುಖವಾಗಿದೆ ಬಯಲಾಟ ಆಡಲು ಮೆಲ್ಲಗಹಳ್ಳಿಯಲ್ಲಿನ ಹುಡುಗ ಒಂದು ಗುಂಪು ತಾಯರಾಗಿರುತ್ತಾರೆ. ರಾಮಾಯಣದ ಒಂದು ವಸ್ತುವನ್ನು ಆಯ್ಕೆ ಮಾಡಿಕೊಂಡು ಬಯಲಾಟ ಆಡಲು ಸಿದ್ದರಾಗುತ್ತಾರೆ. ಅನಿವಾರ್ಯ ಕಾರಣದಿಂದ ರಾಮನ ಪಾತ್ರ ಮಾಡುವರು ಬರುವುದಿಲ್ಲ. ಇದರಿಂದ ಹಲವು ವರ್ಷದಿಂದ ಆಂಜನೇಯ ಪಾತ್ರ ಮಾಡುವನು ರಾಮನ ಪಾತ್ರ ಮಾಡಲು ತಿಳಿಸುತ್ತಾನೆ. ಇದ್ದರಿಂದುಂಟು ಮಾಡುವ ಪರಿಣಾಮವನ್ನು ಪ್ರಬಂಧಕಾರರು ಹಾಸ್ಯದ ಮೂಲಕ ವಿವರಿಸಿದ್ದಾರೆ. ರಾಮನ ಪಾತ್ರದಲ್ಲಿ ಬರುವ ಗಾಂಭೀರ್ಯತೆ ಆಂಜನೇಯ ಪಾತ್ರ ಮಾಡುವರಿಗೆ ಬರುವುದಿಲ್ಲ. ಇದ್ದರಿಂದ ರಾಮ ಪಾತ್ರದಲ್ಲಿನ ಘನತೆಗೆ ಧಕ್ಕೆಯನ್ನುಂಟು ಮಾಡುತ್ತದೆ. ಹನುಮನ ಸಹಜ ಗುಣವಾದ ಚೇಷ್ಟಗಳಿಂದ ಆಗುವ ಅನಾಹುತವನ್ನು ತಿಳಿಸುತ್ತದೆ. ಬಹುಶ: ಈ ಪ್ರಬಂಧದಲ್ಲಿ ಯಾರೂ ಮಾಡುವ ಕೆಲಸವನ್ನು ಅವರು ಇನ್ನೂ ಸಮರ್ಪಕವಾಗಿ ಪಡೆಯಲು ಸಾಧ್ಯವಾಗುತ್ತದೆ ಎಂದಿದ್ದಾರೆ.

ಮಲ್ಲಿಗೆಹಳ್ಳಿ ಬಯಲಾಟದಲ್ಲಿ ಶ್ರೀಕಂಠಾಚಾರ್ಯರ ಆಂಜನೇಯ ಪಾತ್ರ, ಅದರಲ್ಲೂ ಅವರು ಶ್ರೀ ರಾಮನನ್ನು ನಿರುಂಕುಶ, ನಿರಾನಂದ ನಿರವದ್ದು ನಿರ್ವೇದ, ನಿರ್ಗುನ, ನಿರಾವಾರ ನಿತ್ಯತೃಪ್ತ ನಿರಾಕಾಶ ನಿರ್ಮಲ_. ಎಂದು ಬಾಯಿಗೆ ಬಂದಂತೆ ಅರ್ಥವಿಲ್ಲದೆ ಅರಿವಿಲ್ಲದೆ ನಕಾರ ಪ್ರಯೋಗ ಮಾಡಿದ್ದ ಇದು ರಾಮರಸದ ಮಹಿಮೆ ಎಂದಿದ್ದಾರೆ.

ಬಿಂದ್ದಿಗಮ್ಮನ ಜಾತ್ರೆ ಎಂಬ ಪ್ರಬಂಧ ಒಂದು ಸುಂದರವಾದ ಭವ್ಯವಾದ ಅನುಭವವನ್ನು ತಂದ ಕೊಡುತ್ತದೆ. ಜನಪದ ಜೀವನದ ಒಂದು ಮುಖದ ಪಾತ್ರವಿದೆ. ಒಂದು ಪ್ರದೇಶದ ಜನರ ಬದುಕು ಅಲ್ಲಿನ ರಂಗ ಮತ್ತು ಬಂದಿಗಮ್ಮವಿದೆ. ಒಂದು ಪ್ರದೇಶದ ಜನರ ಬದುಕು ಅಲ್ಲಿನ ರಂಗ ಮತ್ತು ಬಂದಿಗಮ್ಮ ಈ ಎರಡು ದೇವರುಗಳ ಸುತ್ತ ಬಳಸಿಕೊಂಡಿರುವ ವಿಧಾನವಾಗಿದೆ. ಆ ಬಗ್ಗೆ ಅವರ ಆಚಾರ ವಿಚಾರ ಸಂಪ್ರದಾಯ ಭಕ್ತಿ ಮತ್ತು ಅದರ ಅಭಿವ್ಯಕ್ತಿ ಈ ಪ್ರಬಂಧದ ಮುಖ್ಯ ತಿರುಳಾಗಿದೆ.

ರಂಗನ ಬೆಟ್ಟದ ರಂಗಯ್ಯ ದೇವರಿಗೂ ಭರತರೂರು ಬಂದಿಗಮ್ಮನಿಗೂ ವರ್ಷಕ್ಕೊಮ್ಮೆ ಮದುವೆಯ ಸಂಭ್ರಮದ ಏರ್ಪಡುತ್ತದೆ ಅಲ್ಲಿನ ಸುತ್ತಮುತ್ತಲಿನ ಜನ ಜಾತ್ರೆಗೆ ಸೇರುತ್ತಾರೆ. ಬೆಟ್ಟದ ರಂಗಪ್ಪ ಮತ್ತು ಹೆಂಡತಿಯನ್ನು ನೋಡಲು ಭರತೂರಿಗೆ ಜನರ ದಂಡು ಧಾವಿಸಿ ಬರುತ್ತದೆ. ಅವನೊಡನೆ ಬಂದಿಗಮ್ಮ ನನ್ನು ತಲೆಯಲ್ಲಿ ಹೊತ್ತ ಪೂಜಾರಿ ಮತ್ತೆ ರಂಗನ ಬೆಟ್ಟಕ್ಕೆ ಹೋಗುತ್ತಾರೆ. ಅಲ್ಲಿಗೆ ಅವರಿಬ್ಬರ ಲಗ್ನ ನೇರವೇರುತ್ತದೆ. ಬಂದಿಗಮ್ಮ ಜಾತ್ರೆಯ ಈ ವರ್ಣನೆಯನ್ನು ತೆಗೆದುಕೊಳ್ಳಬಹುದು.

೧ "ಅದಾವ ಮಾಯೆಯೋ! ವಾತಾವರಣದಲ್ಲಿ ವಿದ್ಯುತ್ ಸಂಚಾರವಾದಂತೆ ಕಾಣುತ್ತದೆ. ಬಂಧುಗಳಿಗೆ ಮುಂಚೆ ಕಾಣುತ್ತಿದ್ದ ನದಿ ತೋಪು ಮಂಟಪ ಜನತೆ ಪೂಜಾರಿಎಲ್ಲ ಮರೆಯಾಗಿ ಒಂದು ದೇವಲೋಕದಲ್ಲಿ ನಾವೆಲ್ಲ ಇರುವಂತೆ ಬಾಸವಾಗುತ್ತದೆ. ಪೂಜಾರಿ ಪೂಜಾರಿಯಂತೆ ಕಾಣುವುದೇ ಇಲ್ಲ. ಅವನು ನಮ್ಮನೆಲ್ಲ ಭಗವತ್ ಸಾನಿಧ್ಯಕ್ಕೆ ಕರೆದುಕೊಂಡು ಹೋಗುವ ಭಕ್ತಾಗ್ರೇಸರನಾಗಿ ತೋರುತ್ತಾನೆ. ಭಗವದ್ಗೀತೆಯನ್ನು ಕೇಳುತ್ತಾ ನಿಂತಿರುವ ಅರ್ಜನ ವಿಶ್ವರೂಪವನ್ನು ನೋಡಲು ಸನ್ನದ್ದನಾದಂತೆ ಜನತೆ ಒಂದು ಅದ್ಭುತವನ್ನು ನೋಡುವ ಮನೋಭಾವವನ್ನು ಪಡೆಯುತ್ತದೆ.

ಒಟ್ಟಿನಲ್ಲಿ ಬಿಂದಿಗಮ್ಮ ಮತ್ತು ರಂಗ ದೇವರು ಸುತ್ತಮುತ್ತ ಜನರ ಸಂತೋಷ ಸಂಭ್ರಮ ಮತ್ತು ಸಾಹಸಗಳಿಗೆ ಆಧಾರವಾಗಿದೆ. ಜನಜೀವನದ ಚೇತನ ಶಕ್ತಿಯಾಗಿದ್ದಾರೆ. ನಮ್ಮ ನಾಡಿನ ಯಾವುದೇ ಪ್ರಾಂತ್ಯದ ಗ್ರಾಮ ದೇವತೆ ಈ ತೆರನಾಗಿ ಅಲ್ಲಿಯ ಜನಜೀವನದ ಮೇಲೆ ಪ್ರಭಾವ ಬೀರುವುದು ಕಂಡು ಬರುತ್ತದೆ. ಇಡೀ ಪ್ರಬಂಧ ಹಿನ್ನೆಲೆಯಲ್ಲಿ ಪ್ರಬಂಧಕಾರರು ಜನತೆಯ ನಂಬಿಕೆಗಳ ವಿಷಯದಲ್ಲಿ ಇರುವ ಅಪಾರ ಸಹಾನುಭೂತಿಯನ್ನು ಪ್ರತಿಬಿಂಬಿಸುತ್ತದೆ. ಇದು ಗೊರೂರು ಪ್ರಬಂಧಗಳಲ್ಲಿ ಉತ್ತಮವಾಗಿದೆ.

ಜಪ ತಪ ಅನುಷ್ಠಾನ ಈ ಪ್ರಬಂದವೂ ಆದುನಿಕ ಜೀವನದ ಸಂಸಾರಿಕ ಜೀವನದ ಚಿತ್ರಣವನ್ನು ನೀಡುತ್ತದೆ. ಸೋಮಾರಿಯಾಗದೇ ಕ್ರಿಯ ಶೀಲತೆಯಿಂದ ಕೂಡಿದರೆ ಮಾತ್ರ ಜೀವನ ನಡೆಸಲು ಸಾಧ್ಯವಾಗುತ್ತದೆ. ಯಾವುದೇ ಒಂದು ಕೆಲಸವನ್ನು ಮಾಡಬೇಕಾದರೆ ಮನುಷ್ಯನ ಪ್ರಯತ್ನ ಬೇಕಾಗುತ್ತದೆ ಅದು ಯಾವುದೇ ಜಪವಾಗಲಿ ತಪವಾಗಲಿ ಮಾಡುವುದರಿಂದ ಅದು ಅನುಷ್ಠಾನಕ್ಕೆ ಬರುವುದಿಲ್ಲ.

---

ಅಡಿಟಿಪ್ಪಣಿ:೧ ಹಳೆಯಪಳೆಯಮುಖಗಳು ಪ್ರಬಂಧ ಸಂಕಲನ. ಪುಟ ಸಂಖೆ .೩೭ .೩೮, ಗೊರೂರರು ರಾಮಸ್ವಾಮಿ ಅಯ್ಯಂಗಾರ್

೧.

ಮನುಷ್ಯನ ಸೋಮಾರಿತನಕ್ಕೆ ಅಲ್ಲಾವುದ್ದೀನ್‌ನ ದೀಪ ಹಾಗೂ ಸಾಲಿಗ್ರಾಮ ಯಾವುದು ಕೆಲಸಕ್ಕೆ ಬರುವುದಿಲ್ಲ. ಜಪ ತಪ ಅನುಷ್ಠಾನಗಳು ದೇವರಿಗಾಗಿ ಅಲ್ಲ. ದೊರೆಯದೆ ಇರುವ ನಿತ್ಯ ಬಳಕೆಯ ವಸ್ತುಗಳಿಗಾಗಿ ಎಂಬುದನ್ನು ಅದೇ ಹೆಸರಿನ ಪ್ರಬಂಧದಲ್ಲಿ ತೋರಿಸಿರಿಕೊಟ್ಟಿದ್ದಾರೆ. ಈ ಪ್ರಬಂಧ ಧನಿಪೂರ್ಣವಾಗಿದ್ದು ವ್ಯಂಗ್ಯೋಕ್ತಿಗಳಿಂದ ಕೂಡಿದೆ.

'ಕನ್ನಡ ಮೌಲ್ವಿ' ಪ್ರಬಂಧವೂ ಆಧುನಿಕ ಸಮಾಜದ ಪ್ರಸ್ತುತ ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಹಿಂದೂ ಮುಸ್ಲಿಂ ಪ್ರತಿಭಟನೆ ಭಾಷೆಯ ಹೋರಾಟಗಳ ಹೆಚ್ಚಾಗುತ್ತವೆ. ವೃತ್ತಿಯಿಂದ ಉರ್ದು ಪಾಠ ಹೇಳುವ ಒಬ್ಬ ಮೌಲ್ವಿ ತನ್ನ ಸ್ವಂತ ಪ್ರತಿಭಟನೆಯಿಂದ ಕನ್ನಡವನ್ನು ಕಲಿತು ಕನ್ನಡ ಪ್ರಸಿದ್ಧ ಕಾವ್ಯವಾದ 'ಕುಮಾರವ್ಯಾಸ' ಓದಿ ಅದರ ಅರ್ಥವನ್ನು ಹೇಳುತ್ತ ಕನ್ನಡದ ಉತ್ತಮ ಪುಸ್ತಕವನ್ನು ಓದಿ ಅದನ್ನು ಇತರರಿಗೆ ತಿಳಿಸುವುದರ ಮೂಲಕ ಕನ್ನಡ ಹಿರಿಮೆಯನ್ನು ಹೆಚ್ಚಿಸಿದ್ದಾರೆ. ಅವರು ಡಿ.ವಿ.ಜಿ. ಯವರ 'ಉಮರನ ಒಸಗೆ' ಯನ್ನು ಬಾಯಿ ಪಾಠ ಮಾಡಿ ಕೊಂಡು ವಿಷಯವನ್ನು ಇತರರಿಗೆ ತಿಳಿಸುತ್ತಿದ್ದರು. ಮತ್ತು ಗೊರೂರು ಕಥೆಗಳ ಬರವಣಿಗೆಯನ್ನು ಮೆಚ್ಚಿಕೊಂಡ ಅವರನ್ನು ನೋಡುವ ಹಂಬಲವನ್ನು ವ್ಯಕ್ತ ಪಡಿಸುತ್ತಾನೆ. ಅಂತಹ ಮುಸಲ್ಮಾನ ವ್ಯಕ್ತಿತ್ವ ಮತ್ತು ಕನ್ನಡ ಭಾಷೆಯ ಮೇಲಿನ ಪ್ರೀತಿ ಸಭ್ಯನನ್ನು ಇಲ್ಲಿ ಪ್ರಬಂಧಕಾರರು ಪರಿಚಯ ಮಾಡಿಕೊಡುತ್ತಾರೆ.

ಇಲ್ಲಿ ಪ್ರಬಂಧಕಾರರು ಬಗ್ಗೆ ಗೊರೂರರಿಗೆ ಇರುವ ಕಳಕಳಿಯನ್ನು ಹಿಂದೂ ಮುಸಲ್ಮಾನರ ನಡುವಿನ ಭಾವೈಕ್ಯತೆ ಕನ್ನಡ ಭಾಷೆಗೆ ಹೇಗೆ ಸಹಾಯವಾಗುತ್ತದೆ ಎಂಬುದನ್ನು ಕಾಣಬಹುದಾಗಿದೆ. ಗೊರೂರು ಅನ್ಯಧರ್ಮಿಯರಿಂದಲೂ ಭಾರತೀಯ ಸಂಸ್ಕೃತಿಯ ಮೌಲ್ಯವನ್ನು ನಿರೀಕ್ಷಿಸುವ ಪ್ರಯತ್ನ ಮಾಡಿದ್ದಾರೆ. ಅವರು 'ಕನ್ನಡ ಮೌಲ್ವಿ' ಎಂಬ ಪ್ರಬಂಧದಲ್ಲಿ ಮುಸ್ಲಿಂನ ಪಾತ್ರವನ್ನು ಗಮನಿಸಬಹುದು.

ಇಲ್ಲಿ ಗೊರೂರು ಭಾವೈಕ್ಯತಾ ಮನೋಭಾವ ಮೆಚ್ಚುವಂಥದ್ದು. ಆದರೆ ಗೊರೂರು ನಿರೀಕ್ಷಿಸುವಂತೆಯೇ ಮೌಲ್ವಿಯ ಗೊರೂರರಿಂದ ಪ್ರತಿಯಾಗಿ ತನ್ನ ಧರ್ಮ ಹಾಗೂ ಸಂಸ್ಕೃತಿಯ ಪರವಾಗಿ ಎನನೂ ನಿರೀಕ್ಷಿಸದೆ ಅವರ ಪ್ರತಿಕ್ರಿಯೆ ಹೇಗಿರುತ್ತದೆ ಎಂಬ ಕುತೂಹಲ ಸಹಜವಾಗಿದೆ.

ನಮ್ಮ ಎಮ್ಮೆಗೆ ಮಾತು ತಿಳುವುದೆ ಎಂಬ ಪ್ರಬಂಧದಲ್ಲಿ ವಸ್ತು ಎಮ್ಮೆಯಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಯಾವುದೇ ಒಂದು ಮೂಕ ಪ್ರಾಣಿಗೂ ತನ್ನದೇ ಆದ ಒಂದು ಪ್ರಪಂಚವಿರುತ್ತದೆ. ಆದರೆ ಮನುಷ್ಯನು ಅದಕ್ಕೆ ಬೆಲೆಕೊಡುವುದಿಲ್ಲ. ನಮ್ಮ ಎಮ್ಮೆಗೆ ಮಾತು ತಿಳಿಯುವುದು ಈ ಪ್ರಬಂಧದಲ್ಲಿ

ಮೊದಲು ಆರಂಭವಾಗುವುದು ನಮ್ಮ ನಾಡಿನ ಕುರಿತ ಒಂದು ಚಿಂತನೆಯಿದೆ. ನಮ್ಮ ನಾಡು ಎಮ್ಮೆಯ ನಾಡು, ಮಹಿಷಮಂಡಲವೆಂಬುದು ನಾವು ಹೆಮ್ಮೆಯಿಂದ ಹೇಳಿಕೊಳ್ಳುವ ಹೆಸರು. ಈ ಪ್ರಬಂಧದ ಮೊದಲ ಸಾಲಿನಲ್ಲಿಯೇ ಪ್ರಬಂಧದ ಪ್ರಮುಖ ವಸ್ತುವಾದ ಎಮ್ಮೆಯ ಬಗ್ಗೆ ಒಂದು ವಿಶೇಷವಾದ ಆಸಕ್ತಿಯನ್ನು ತಂದುಕೊಡುತ್ತದೆ. ಜೊತೆಗೆ ಪ್ರಬಂಧದಲ್ಲಿ ಬರುವ ಹಾಸ್ಯದ ಸನ್ನೀವೇಶಗಳು ಪ್ರವೇಶ ಮಾಡುತವೆ. ನಮ್ಮ ನಾಡು ಎಮ್ಮೆಯ ನಾಡು ಎಂದರೆ ಯಾರು ಭುಜ ತಟ್ಟಿಕೊಳ್ಳುತ್ತಾರೆ. ನಾಚಿ ಅಪಮಾನಗೊಳ್ಳುತ್ತಾರೆ. ವಸ್ತು ಸ್ಥಿತಿ ಏನೇ ಇದ್ದರೂ ಅನೇಕ ವಿಶಿಷ್ಟ ಗುಣವೆಂದಾಗ ನಗುಬರುವುದು ಸಹಜ. ಆದರೆ ತಾವು ಯಾವ ಒಂದು ವಸ್ತು ವಿಷಯಕ್ಕೆ ಆ ಮೂಲಕ ಒಂದು ಮಹತ್ವವನ್ನು ತಂದುಕೊಟ್ಟ ಓದುಗರ ಮನಸ್ಸನ್ನು ಆಕರ್ಷಿಸಿ ಅವರನ್ನು ಸೆಳೆಯುವುದು ಗೊರೂರ ಪ್ರಮುಖ ಗುರಿ ಹಾಗೂ ಪ್ರಬಂಧಗಳನ್ನು ರಚಿಸಬಲ್ಲ ಶಕ್ತಿ ನಮ್ಮ ಎಮ್ಮೆಗೆ ಮಾತು ತಿಳಿಯುವುದು ಪ್ರಬಂಧ ಸಾಕ್ಷಿಯಾಗಿದೆ.

ಸಾಮಾನ್ಯವಾಗಿ ಎಮ್ಮೆಯನ್ನು ನಾವು ಮಂದವಾದ ಪ್ರಾಣಿ ಎಂದು ರೂಢಿಯಲ್ಲಿ ಇದೆ. ಆದರೆ ಇದರಲ್ಲಿ ಎಮ್ಮೆ ಚುರುಕು ಪ್ರಾಣಿ. ಅದಕ್ಕೆ ಬೇರೆಯ ಪ್ರಾಣಿಯಂತೆಯೇ ಬುದ್ದಿಯಿದೆ ಎಂಬುದನ್ನು ತಿಳಿಸಿದ್ದಾರೆ. ನಮ್ಮ ನುಡಿ, ಆಡುವ ಮಾತುಗಳು ಅದಕ್ಕೆ ಚೆನ್ನಾಗಿ ತಿಳಿಯುತ್ತವೆಂಬುದನ್ನು ತಮ್ಮ ಪ್ರಮಾಣಿಕವಾದ ಅನುಭವಗಳೊಂದಿಗೆ ಸಮರ್ಥಿಸಿದ್ದಾರೆ.

ಎಮ್ಮೆ ಕರು ಹಾಕುವಾಗ ಇವರು ಗೋಣಿ ಚೀಲವನ್ನು ಹಿಡಿದುಕೊಂಡು ಅದರ ಕರುನೆಲಕ್ಕೆ ಬೀಳದಂತೆ ಹಿಡಿದುಕೊಳ್ಳಲು ಪ್ರಯತ್ನ ಪಡುವಾಗ ಇವರ ಮಾತನ್ನು ಮೊದಲೇ ಕೇಳಿಸಿಕೊಂಡ ಎಮ್ಮೆ ಕರುವನ್ನು ನೆಲಕ್ಕೆ ಎಸೆದದ್ದು, ಹೆಂಡತಿಯಂತೆಯೇ ಸೀರೆಯನ್ನು ಉಟ್ಟು ಪ್ರಬಂಧಕಾರರು ಹಾಲು ಕರೆಯಲು ಹೋದಾಗ ಅದು ಒದ್ದದು ಇಂತಹ ಅನೇಕ ಪ್ರಸಂಗಗಳು ನಮ್ಮ ಎಮ್ಮೆಗೆ ಮಾತು ತಿಳಿಯುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ.

ನಮ್ಮ ಎಮ್ಮೆಗೆ ಮಾತು ತಿಳಿಯುಲಿ ಬಿಡಿಲಿ, ಅದನ್ನು ಸಮಾಜದಲ್ಲಿ ಜನರು ಸ್ವಿಕರಿಸಲಿ ಬಿಡಲಿ ಆದರೆ ಅದನ್ನು ನಿರೂಪಿಸುವುದರ ಮೂಲಕ ಇವರ ಅನುಭವಗಳ ದಟ್ಟ ವರ್ಣನೆಯನ್ನು ಯಾರೂ ಮರೆಯುವಂತಿಲ್ಲ. ಪ್ರಸಕ್ತ ಸಮಾಜಕ್ಕೆ ಇದೊಂದು ಉತ್ತಮ ಪ್ರಬಂಧವಾಗಿದೆ.

'ದಿ ವಿಲೇಜ್ ಪೋಸ್ಟ್‌ಮನ್' ಎಂಬ ಪ್ರಬಂಧವೂ ಸಮಾಜದಲ್ಲಿ ನಡೆಯುವ ಒಂದು ಸಾಮಾಜಿಕ ಬೆಳವಣಿಗೆಯಾಗಿದೆ. ಪೋಸ್ಟ್ ಎಂಬುದು ಆಧುನಿಕತೆಯ ಸಂಕೇತವಾಗಿದೆ. ಮನುಷ್ಯರಿಗೆ ಒಂದು ಸುದ್ದಿ ಸಮಾಚಾರವನ್ನು ತಿಳಿಸಲು ಇದು ಸಹಾಯಕವಾಗುತ್ತದೆ.

ಈಸ್ಟ್ ಇಂಡಿಯಾ ಕಂಪನಿಯ ಆಡಳಿತಕ್ಕೆ ಬಂದ ನಂತರದಲ್ಲಿ 'ಪೋಸ್ಟ್' ಸರ್ವಿಸ್ ಪ್ರಾರಂಭವಾಯಿತು. ಅಂದರೆ ಹಿಂದಿನ ಕಾಲದಲ್ಲಿ ಅದು ಚಾಲ್ತಿಯಲ್ಲಿ ಇದ್ದರು. ಸರಿಯಾದ ಸಮಯಕ್ಕೆ ತಲುಪಲು ವಿಳಂದವಾಯಿತು. ಹಾಗೆಯೇ ಸಾರಿಗೆ ವ್ಯವಸ್ಥೆಯ ತೊಂದರೆಯಿಂದ ಪೋಸ್ಟ್‌ಗಳು ಸರಿಯಾದ ವೇಳೆಗೆ ತಲುಪಿಸಲು ಸಾಧ್ಯವಾಗುತ್ತಿರಲಿಲ್ಲ. ಇದನ್ನೊಂದು ವ್ಯವಸ್ಥೆಗೆ ರೂಪಕ್ಕೆ ತರುವ ವೇಳೆಗೆ ಆಧುನಿಕತೆಯ ಪ್ರವೇಶ ಮಾಡಿತು. ಇದರ ಫಲವಾಗಿ ಪತ್ರವ್ಯವಹಾರಗಳಿಗೆ ಅಧಿಕೃತವಾಗಿ ಇದಕ್ಕೆ ಚಾಲನೆ ನೀಡಲಾಯಿತು.ಪೋಸ್ಟ್ ಎಂಬುದು ನಗರ ಪ್ರದೇಶದಿಂದ ಹಳ್ಳಿ ಹಳ್ಳಿಗೂ ತನ್ನ ವ್ಯಾಪ್ತಿಯನ್ನು ವಿವರಿಸುತ್ತದೆ. ಇದರ ಕಾರ್ಯ ನಿರ್ವಹಣೆಯನ್ನು ಮಾಡಲು ಒಬ್ಬ ವ್ಯಕ್ತಿಯನ್ನು ಒಂದು ಹಳ್ಳಿಗೆ ನೇಮಕ ಮಾಡಿರುತ್ತಾರೆ. ಇದರಿಂದ ಸಾಮಾನ್ಯ ಜನರಿಗೂ ಸುದ್ದಿಯನ್ನು ಪಡೆಯಲು ಸಹಾಯಕವಾಗುತ್ತದೆ. ಇಂತಹ ಕೆಲಸವನ್ನು ಮಾಡುವ ಪೋಸ್ಟ್‌ಮ್ಯಾನ್‌ಗಳು ಹಳ್ಳಿಯ ಜನರಿಗೆ ತುಂಬ ಪ್ರಿಯವಾದ ವ್ಯಕ್ತಿಯಾಗಿರುತ್ತಾನೆ. ಇವನ ಕೆಲಸವೂ ನಿಜವಾಗಿ ತುಂಬ ಜವಾಬ್ದಾರಿಯುತವಾದದು ಎಂದರೆ

[೧] "ದೂರದ ಹಳ್ಳಿಗಳಲ್ಲಿ ಜನತೆ ಅನೇಕ ವಿಷಯಗಳಿಗಾಗಿ ಅಂದರೆ ವ್ಯವಸಾಯ, ವ್ಯಾಪಾರ ಬಂಧುಗಳ ಆರೋಗ್ಯ ಮಕ್ಕಳ ವಿದ್ಯಾಭ್ಯಾಸ ಮಕ್ಕಳ ವಿದ್ಯಾಭ್ಯಾಸ ಇವುಗಳಿಗೆಲ್ಲ ಕಾಗದಗಳನ್ನು ಅತ್ಯಂತ ಆತುರತೆಯಿಂದ ನಿರೀಕ್ಷಿಸುತ್ತಿರುತ್ತಾರೆ. ಪೋಸ್ಟ್‌ಮ್ಯಾನ್‌ಗಳಿಗೆ ಕಲ್ಪನಾಶಕ್ತಿಯೂ ಸಹಾನುಭೂತಿಯು ಇರಬೇಕು. ಅವನು ಸಾವಕಾಶಮಾಡದೆ ಕಾಗದಗಳನ್ನು ತೆಗೆದುಕೊಂಡು ಹೋಗಿ ವಿಳಾಸದಾರರಿಗೆ ಒಪ್ಪಿಸಬೇಕು. ಆಗಲೇ ತಲುಪದಿರುವ ಗ್ರಾಮಾಂತರ ಕಾಗದಗಳನ್ನು ಇನ್ನೂ ತಡ ಮಾಡುವುದು. ಅಕ್ಷಮ್ಯ ಅಪಚಾರ.

ಒಟ್ಟಾರೆಯಾಗಿ ಈ ಪ್ರಬಂಧದಲ್ಲಿ ಸಮಾಜದಲ್ಲಿ ನೈತಿಕ ಜವಾಬ್ದಾರಿಯುತ ಮನುಷ್ಯನ ಚಿತ್ರಣದೊಂದಿಗೆ ಮನುಷ್ಯನು ಸ್ವಾರ್ಥಿಯಾಗದೆ ಜನರ ಸೇವೆ ಮಾಡಲು ಮುಂದಾಗುವುದನ್ನು ಸಹ ಮಾನವೀಯತೆಯಿಂದ ಕೆಲಸ ಮಾಡುವ ಪೋಸ್‌ಮ್ಯಾನ್‌ಗಳ ಅವಶ್ಯಕತೆ ಎಂದಿಗೂ ಇದ್ದೇ ಇರುತ್ತದೆ. ಸೇವೆಯೇ ತಮ್ಮ ಪರಂಪರೆ ಎಂಬುದನ್ನು ಮರೆಯಬಾರದು ಎಂದು ತಿಳಿಸುತ್ತಿದ್ದಾರೆ.

---

ಅಡಿಟಿಪ್ಪಣಿ: ೧ ಹಳೆಯಪಳೆಯಮುಖಗಳು ಪ್ರಬಂಧ ಸಂಕಲನ. ಪುಟ ಸಂಖೆ .೨೮೭, ಗೊರೂರರು ರಾಮಸ್ವಾಮಿ ಅಯ್ಯಂಗಾರ್

'ನಮ್ಮ ಊರ ಬಸ್ಸು' ಪ್ರಬಂಧದಲ್ಲಿ ಕುಲ ಮೂಲವನ್ನು, ಋಷಿ ಮೂಲವನ್ನೂ ಕೇಳಕೂಡದು. ಹಾಗೇಯೇ ನಮ್ಮ ಊರಿನ ಬಸ್ಸಿನ ಮೂಲವನ್ನು ಕೇಳಕೂಡದು ಎನ್ನುತ್ತಾರೆ. ಗೊರೂರು ಹಳ್ಳಿಯ ಚಿತ್ರಣ ಕಾಲದಲ್ಲಿ ಗೊರೂರನ್ನು ಸೇರಿದಂತೆ ಗ್ರಾಮೀಣ ಪ್ರದೇಶಗಳಿಗೆ ಪ್ರಯಾಣ ಸೌಕರ್ಯ ವ್ಯವಸ್ಥಿತವಾಗಿ ಏರ್ಪಟ್ಟಿರಲಿಲ್ಲ. ಜೊಡೆತ್ತಿನ ಗಾಡಿಯಲ್ಲಿ ಬೇರೆ ಪ್ರದೇಶಗಳಿಗೆ ಪ್ರಯಾಣ ಮಾಡಬೇಕಿತ್ತು. ಗೊರೂರಿಗೆ ಬಸ್ಸು ಒಂದು ಅದರಲ್ಲಿ ಮೊದಲ ಸಲ ಕುಳಿತು ಪ್ರಯಾಣ ಮಾಡಿದ ಸಂಗತಿಯನ್ನು ನಮ್ಮ ಊರು ಬಸ್ಸು ಎಂಬ ಶೀರ್ಷಿಕೆಯಲ್ಲಿ ಗೊರೂರು ಸ್ವಾರಸ್ಯವಾಗಿ ವರ್ಣಿಸಿದ್ದಾರೆ.

"ನಮ್ಮೂರಿಗೂ ಒಂದು ಬಸ್ ಬಂದಿತು. ನಾಗರೀಕತೆಯ ಶಿಖರವನ್ನು ಏರಿ ಬಿಟೆವು ನಾವೂ ಎಂದು ಗೊರೂರುರಂಥವರೂ ಕುಣಿದಾಡಿದ್ದುಂಟು. ಅವರು ಹಳ್ಳಿಯಲ್ಲಿ ಯಾರಾದರೂ ಗಟ್ಟಿಯಾಗಿ ಕಿರುಚಿದರೆ ಬಸ್ಸು ಕಿರುಚಿದಂತೆ ಅವನು ಕಿರುಚುತ್ತಾನೆ ಎನ್ನುತ್ತಿದ್ದರಂತೆ.

'ಹಳ್ಳಿಯ ಬಸ್ಸು' ಗೊರೂರು ಮೂರು ಪ್ರಬಂಧಗಳಿಗೆ ವಿಷಯವಾಗುತ್ತದೆ 'ನಮ್ಮೂರ ಬಸ್ಸು' ಅದರ ಏಜೆನ್ಸಿಯನ್ನು ಹಿಡಿಯಲು ಹಲವಾರು ನಡೆಸಿದ ಪೈಪೋಟಿಯ ಸ್ವಾರಸ್ಯಕರವಾದ ವಿವರಗಳನ್ನು ವಿವರಿಸುತ್ತದೆ. ಈ ಬಸ್ಸು ಇನ್ನೂ ಒಂದು ಪ್ರಬಂಧ ವಸ್ತುವನ್ನು ಒದಗಿಸಿದ್ದು 'ಪ್ರಥಮ ಹನಿಮೂನ್ ಪ್ರವಾಸ' ಎಂಬ ಪ್ರಬಂಧ ಹೊಸದಾಗಿ ಮದುವೆಯಾದ ದಂಪತಿಗಳು ಬಸ್ಸಿನಲ್ಲಿ ಪ್ರಯಾಣ ಮಾಡುವ ಸಂದರ್ಭ. ಅಂದರೆ ಅದು ಸರಿಯಾದ ಸಮಯದಲ್ಲಿ ಬರದೆ ಬಸ್ಸು ಹಳ್ಳಿಗೆ ಬರುವ ವೇಳೆಗೆ ಅದು ಬಂದು ಹೊರಟ ಗುರಿ ಸೇರುವ ಅವಾಂತರವನ್ನು ಪ್ರಬಂಧಕಾರರು ಮನೋಹರವಾಗಿ ಚಿತ್ರಿಸಿದ್ದಾರೆ. ಹೊಸ ದಂಪತಿಗಳ ಹನಿಮೂನ್ ಪ್ರವಾಸ ಬಸ್ಸಿನಲ್ಲಿ ಮುಕ್ತಾಯವಾಗುತ್ತದೆ. .

"ಹೇಮಾವತಿ ತೀರದಲ್ಲಿ" ಎಂಬ ಪ್ರಬಂದಕ್ಕೆ ಹೇಮಾವತಿಯೇ ಪ್ರಧಾನ ವಿಷಯ ಹೇಮಾವತೀ ನದಿಯ ನಮ್ಮ ಜೀವನದ ಉಸಿರು. ನಮ್ಮ ನಾಡಿಯರಕ್ತ ನಮ್ಮ ಊರಿನ ಬೀದಿ ಎಂಬ ಸಾಲುಗಳಿಂದ ರಚಿತವಾದ ಗ್ರಾಮೀಣ ಪರಿಸರ ಚಿತ್ರಿಸುತ್ತದೆ.

"ಹೇಮಾವತಿನದಿಯ ನಮ್ಮೂರ ಉಸಿರು ನದಿಯ ದಡದಲ್ಲಿ ನಿಂತುಕೊಂಡು ನೋಡಿದರ ನದಿ ನಮ್ಮೂರ ಬಳಿ ಇರುವಷ್ಟು ಸೊಗಸಾಗಿ ಮತ್ತಲ್ಲೂ ಇಲ್ಲವೆಂದು ಯಾರಿಗಾದರೂ ತೋರುವುದು_..

ಹೀಗೆ ಪ್ರಾರಂಭವಾಗುವ ಪ್ರಬಂಧ ತನ್ನ ಕಾವ್ಯರಮಣಿಯತೆಯಿಂದಲೂ ಓದುಗರನ್ನೂ ಸೆರೆಹಿಡಿಯುತ್ತದೆ. ಮುಂದೆ ನದೀಯ ಪಾತ್ರವನ್ನು ಬ್ರಾಹ್ಮಣಗಂಡಸರು ಬ್ರಾಹ್ಮಣಹೆಂಗಸರು, ಒಕ್ಕಲಿಗರು

ತಮ್ಮ ತಮ್ಮ ಕಡುಗಳನ್ನಾಗಿ ಹಂಚಿಕೊಂಡು ತಮ್ಮ ತಮ್ಮ..ಶ್ರೇಷ್ಠತೆಯನ್ನು ಸ್ಥಾಪಿಸಲು ನಡೆಸುವ ಜಗಳಗಳ ಲಘು ನಿರೂಪಣೆ ಬರುತ್ತದೆ. ನದಿತೀರದಲ್ಲಿ ಪ್ರಸಕ್ತವಾದ ಮುತ್ತಗದ ಎಲೆ ತರಲು ಹೋದ ಕಂಕರ ರಾಮ್ಮೆಂಯಯನೆಗಾರಿಗೆ ಶೀನಪ್ಪ ಮತ್ತು ಕಾಗೆ ದೇಶಕರು ಮಾಡಿದ ಮೋಸದ ವರ್ಣನೆಯ ನಗೆಯ ಹೊನಲನ್ನು ಹರಿಸುತ್ತವೆ.

ಮೊದಲು ದೊಡ್ಡ ಕಲ್ಲಿಗೂ ಅನಂತರ ಮಟ್ಟಿಕಲ್ಲಿಗೂ ಈಜ ಸಾಂಸತಿಯನ್ನು ಮರೆವಲ್ಲಿ ಯುವಕರ ನಡುವೆ ಬ್ರಾಹ್ಮಣ ಒಕ್ಕಲಿಗ ಎಂಬ ವೇದ ಎಷ್ಟು ಸಹಜವಾಗಿ ಮಾಯಾವಾಗುತ್ತದೆ ಎಂಬ ಸಂದರ್ಭದ ಸಹಜ ಚಿತ್ರಣ ಆಮೇಲೆ ಬರುತ್ತದೆ. ನರಸಿಂಹಸ್ವಾಮಿ ದೇವಾಲಯ ಮತ್ತು ಅದರ ಪಾರುಪತ್ರಗಾರರ ಮಡಿಯನ್ನು ವರ್ಣಿಸುವ ಭಾಗ ಮುಂದಿನದು. ಹೇಮಾವತಿ ಎಂಬುದು ಹೇಮಾವತಿ ನದಿ ನಮ್ಮ ಜೀವದ ಉಸಿರು ಪಲ್ಲವಿಯಿಂದ ಮುಕ್ತಾಯವಾಗುತ್ತದೆ. ಈ ಪ್ರಬಂಧ ಹತ್ತು ಹಲವು ರಮ್ಯ ಚಿತ್ರಗಳ ಬಂದು ಚಿತ್ರರಾದ ನದಿಯೋ ಈ ಚಿತ್ರ ಮೌಕ್ತಿಕಗಳನ್ನು ಪೋಣಿಸಿ ಹಿಡಿದಿರುವ ರೇಷ್ಮೆಯವಾದ ಗೊರೂರನ ಬರಹಗಳ ಮೋಹಕತೆ ಎಂದೂ ಮಚ್ಚುವಂಥದ್ದು ಎಂಬುದು ವಿ.ಸೀತಾ ರಾಮಯ್ಯ ನವರ ಮಾತನ್ನು ಎಲ್ಲಿ ಸ್ಮರಿಸಬಹದು.

"ಸಫಲ ಜೀವನ" ಎಂಬ ಪ್ರಬಂಧ ಭೂಮಿಯ ಮೇಲೆ ಇರುವ ಎಷ್ಟು ಕುಟುಂಬಗಳು ಕುಟುಂಬ ನಿರ್ವಹಣೆಯಲ್ಲಿ ಸಫಲವಾಗಿ ಯಶಸ್ವಿ ನಡೆಸಿರುವರು ಯಾರಿಗೆ ಗೊತ್ತು ಆದರೆ ಒಂದು ಅಂದಾಜಿನ ಪ್ರಕಾರ ಶೇ ೫೦ ರಷ್ಟು ಕುಟುಂಬಗಳು ಸರಿಯಾಗಿ ನಡೆಯುತ್ತಲೆ ಇಲ ಅಂತಹದೇ ಒಂದು ಜೀವನ ನಮ್ಮ ವೆಂಕಟರಾಯರದು ಇವರು ತಾಲ್ಲೂಕು ಕಛೇರಿಯಲ್ಲಿ ಮೂವತ್ತೈದು ವರ್ಷಗಳು ಕೆಲಸಮಾಡಿ ನಿವೃತ್ತರಾದರು.

---

ಅಡಿಟಿಪ್ಪಣಿ :
೧ ಹೇಮವತಿ ತೀರದಲ್ಲಿ ಮತ್ತು ಇತರ ಪ್ರಬಂದ ಸಂಕಲನ. ಪುಟ ಸಂಖೆ ೧,
ಗೊರೂರರು ರಾಮಸ್ವಾಮಿ ಅಯ್ಯಂಗಾರ್

ಅದು ಹಳೆಯಕಾಲದ ಸಂಬಳ ತಿಂಗಳಿಗೆ ೨೦ ರೂಪಾಯಿಗಳ ಸಂಬಳದಿಂದ ವರುಷಕ್ಕೆ ಅರ್ಧ ರೂಪಾಯಿ ೩ ವರುಷಕ್ಕೆ ೨ ರೂಪಾಯಿ ಬಡ್ತಿ ಹೀಗೆ ನಿವೃತ್ತರಾಗುವಾಗ ೪೦ ರೂಪಾಯಿ ಸಂಬಳದೊಂದಿಗೆ ನಿವೃತ್ತಾರಾದರು.

ನಿವೃತ್ತಿ ನಂತರ ಇವರಿಗೆ ನಿವೃತ್ತಿವೇತನ ಅಂತ ದೊರೆತಿದ್ದು ೧೭ ವರೆ ರೂಪಾಯಿ ಜೊತೆಯಲ್ಲಿ ಜೀವ ವಿಮಾ ಹಣ, ಮಿತವ್ಯಯದ ಹಣ, ಪೋಸ್ಟ್ ಆಫೀಸಿನಲ್ಲಿ ಅವರ ಹೆಂಡತಿ ಕೂಡಿಟ್ಟಿದ್ದ ಚಿಲ್ಲರೆ ಎಲ್ಲಾ ಸೇರಿ ವೆಂಕಟರಾಯರಿಗೆ ಸಾವಿರದ ಎಂಟುನೂರು ರೂಪಾಯಿ ಒಂದೇ ಗಂಟಿನಲ್ಲಿ ದೊರಕಿತು.

ನಿವೃತ್ತರಾದ ಮೇಲೆ ಎಲ್ಲಿ ಇರೋಣ, ಎಲ್ಲಿ ಎಂಬ ಯೋಚನೆ ಅವರಿಗೆ ಸ್ವಾಭಾವಿಕವಾಗಿ ಹೊಳೆಯಿತು. ನಂತರ ಅವರ ಹೆಂಡತಿಯ ಸಲಹೆಯಂತೆ "ಮಲ್ಲಿಗೆಹಳ್ಳಿಯಲ್ಲಿ" ಇರೋಣ ಎಂದು ನಿರ್ಧರಿಸಿದರು. ಹೇಳಿ ಕೇಳಿ ಅದೊಂದು ಪ್ರಕೃತಿಯ ಕೂಸು ಎಂಬಂತೆ ನದಿ ಮತ್ತು ನದಿಯ ದಡದ ಮೇಲೆ ದೇವಸ್ಥಾನ ಎಲ್ಲವೂ ಸೊಗಸಾಗಿತ್ತು. ಈ ನಡುವೆ ವೆಂಕಟರಾಯರಿಗೆ ಹೊಸ ವಾತವಾರಣಕ್ಕೆ ಪ್ರಾರಂಭದಲ್ಲಿ ಹೊರಗೆ ಹೋಗಲು ಇಷ್ಟವಿಲ್ಲದಿದ್ದರೂ ನಂತರ ಹೆಂಡತಿಯ ಬಲತ್ಕಾರದಿಂದ ಹೊರಗೆ ಹೋಗಿ ದೇವಸ್ಥಾನ ಅಲ್ಲಿ ಇಲ್ಲಿ ಕೂತು ಕಾಲಕಳೆಯ ಬೇಕಾಯಿತು. ನಂತರ ತಮ್ಮ ಜಮೀನಿನಲ್ಲಿ ಹೂವುಗಳನ್ನು ಬೆಳೆಯಲು ಪ್ರಾರಂಭಿಸಿದರು ತಾವೇ ಸಾಕಿದ್ದ ಹಸುವಿನ ಹಾಲನ್ನು ಊರಿನವರೆಗೆ ಯಾವಾಗ ಬೇಕಾದರೂ ಕೊಡಲು ಪ್ರಾರಂಭಿಸಿದರು. ವೆಂಕಟರಾಯರ ಜೀವನವು ವ್ಯವಸಾಯ ಹಾಗೂ ದೇವರ ಪೂಜೆ ಪುರಸ್ಕಾರ ಭಕ್ತಿ ಭಾವಗಳಲ್ಲಿ ಸಾಗುತಿತ್ತು ಅಲ್ಲದೆ ತಮ್ಮ ಇಳಿವಯಸ್ಸಿನ ಅಂತ್ಯ ಕಾಲದಲ್ಲೂ ಸಂಸಾರ ನೌಕೆ ಸ್ವಲ್ಪ ಅಲುಗಾಡಲು ಸಹ ಪ್ರಾರಂಭಿಸಿ ಸಾಕಷ್ಟು ಕುತುಹಲಕರವಾಗಿ ವೆಂಕಟರಾಯರ ಜೀವನ ನೌಕೆ ಸಾಗುತಿತ್ತು.

ಇವರ ಜೀವನದಲ್ಲಿ ನಿವೃತ್ತಿಯ ನಂತರ ಸಾಕಷ್ಟು ಮಜಲುಗಳನ್ನೆ ಕಂಡು ಸಾಗುತಿತ್ತು. ಗಾಂಧಿ ಜಯಂತಿಗೆ ಖಾದಿ ಬಟ್ಟೆಯ ಖರೀದಿಯ ವಿಚಾರ ಹಾಗೂ ಅಂಗಡಿಗೆ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಆಗಮನದಿಂದ ಅಂಗಡಿಯೇ ಶೋಭಿಸುವಂತೆ ಅನುಭವ ಎಲ್ಲವನ್ನು ಈ ಸಫಲ ಜೀವನದಲ್ಲಿ ಚಿತ್ರಿಸಲಾಗಿದೆ ಅಲ್ಲದೆ ಅಧ್ಯಾಯದ ಕೊನೆಯಲ್ಲಿ ಖಾದಿ ಖರೀದಿಗೆ ಬಂದಿದ್ದ ಮುದುಕನ ಜೊತೆ ಅಂಗಡಿಯಲ್ಲಿ ಖಾದಿಯ ವಸ್ತುಗಳಿಗೆ ಸಾಕಷ್ಟು ಚರ್ಚೆಗಳ ನಡೆಯತ್ತದೆ ಇಂತಹ ಹಲವಾರು

ಮಜಲುಗಳನ್ನು ಕಂಡುಕೊಂಡು ವೆಂಕಟರಾಯರ ಜೀವನ ಚಿತ್ರಕಾವ್ಯ ಹಲವು ಮಜಲುಗಳಲ್ಲೇ ಸಾಗುತ್ತದೆ.

ಇಲ್ಲೂ ಲೇಖಕರು ಅವರ ನೌಕರಿ ಜೀವನವನ್ನು ಚಿತ್ರಿಸಲು ಆದರ ನಿವೃತ್ತಿಯ ನಂತರದ ಜೀವನದ ಹಾಗುಹೋಗುಗಳನ್ನು ಚಿತ್ರಿಸಿದ್ದಾರೆ. ಬಹುತೇಕ ನಿವೃತ್ತ ಜೀವನವು ಈಗೆ ಸಾಗಬಹುದು ಎನಿಸುತ್ತದೆ. ಒಟ್ಟಾರೆ ವೆಂಕಟರಾಯರ ಜೀವನ ಸಫಲವಾದ ಜೀವನ ಎಂದರೆ ತಪ್ಪಾಗಲಾರದು ಎಂದೆನಿಸುತ್ತದೆ.

"ಶ್ಯಾನುಭೋಗ" ಎಂಬ ಪ್ರಬಂಧ ಸ್ವಲ್ಪ ಕಾಲಕ್ಕೆ ಮುಂಚೆ ಶ್ಯಾನುಭೋಗ ಎಂಬುವನು ಊರಿಗೆ ಚಾವಡಿ, ದೇವಸ್ಥಾನ, ಕೋಳ, ತೋಪು, ಗೋಮಾಳಗಳಂತೆ ಅನಿವಾರ್ಯವಾದ ಅಂಶವಾಗಿದ್ದನು. ಶ್ಯಾನುಭೋಗನು ಇಲ್ಲದ ಊರೇ ಇರಲಿಲ್ಲ. ಊರಿನ ಎಲ್ಲ ಕೆಲಸಗಳೂ ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ಆತನೆ ಹೊಣೆಗಾರಿಕೆಗೆ ಸೇರಿದ್ದವು.

ಶ್ಯಾನುಭೋಗ ಎಂಬ ಅಧಿಕಾರ, ಆರು ಏಳನೆ ಶತಮಾನಗಳಿಂದ ನಮ್ಮ ದೇಶದಲ್ಲಿ ಇದ್ದಿರಬೇಕೆಂದು ತೋರುತ್ತದೆ ಅನೇಕ ಶಾಸನಗಳಲ್ಲಿ ಶ್ಯಾನುಭೋಗನ ಉಲ್ಲೇಖವಿದೆ.

ಸಾಮಾನ್ಯಾರ್ಥದಲ್ಲಿ ಶ್ಯಾನುಭೋಗನೆಂದರೆ ಸರ್ಕಾರಕ್ಕೆ ಬರಬೇಕಾದ ಭೂಕಂದಾಯದ ಮತ್ತು ಇತರ ಕೆಲವು ನಿಗದಿಯಾದ ಲೆಕ್ಕಗಳನ್ನು ಇಡುವ ವಂಶಪಾರಂಪರ್ಯ ಹಕ್ಕಿನ ಸಣ್ಣ ನೌಕರ ಎಂದು ಅರ್ಥ ಇವನಿಗೆ ಶ್ಯಾನುಭೋಗ ಶಾನಭಾಗ ಶಾನಭವ ಸೇನಭೋವ ಎಂದು ಹೆಸರುಗಳಿವೆ. ಶ್ಯಾನುಬೋಗಕೆ ಶ್ಯಾನಬೋಗತನ ಇವುರ ಇವನ ಹುದ್ದೆಯ ಹೆಸರುಗಳು.

ಶ್ಯಾನಬೋಗರು ಹಿಂದಿನ ಕಾಲದಲ್ಲಿ ಬಾರಾನಮೂನೆ ಫಾರಂ ಅನ್ನು ಬಳಸುತ್ತಿದ್ದರು. ಬಾರಾನಮೂನೆ ಫಾರಂ ಎಂಬ ಮಾತನ್ನು ನಾವೆಲ್ಲ ಬಂದಲ್ಲ ಒಂದು ಸಲ ಕೇಳಿದ್ದೇವೆ ಇಂತಹ ಪಾರಂನಿಂದ ಆ ಕಾಲಿನ ಎಲ್ಲಾ ವಿಷಯಗಳನ್ನು ದಾಖಲಿಸುವುದು ಆ ಗ್ರಾಮದ ಏಕೈಕನೆಂದರೆ ಶ್ಯಾನುಭೋಗರೆ ಆಗಿರುತ್ತಿದ್ದರು ಒಟ್ಟಾರೆ ೧೨ ಲೆಕ್ಕಗಳನ್ನು ಶ್ಯಾನುಭೋಗರು ಬಹಳ ಅಭಿಮಾನದಿಂದ ಇಡುತ್ತಿದ್ದರು. ಅದೇ ಅವರ ರಾಜ್ಯಭಾರವಾಗಿತ್ತು.

ಶ್ಯಾನುಭೊಗತನವೆಂಬುದು ಸರ್ಕಾರದ ಖಾಯಂ ನೌಕರಿಯು ಅವರಿಗೆ ತಿಂಗಳ ಸಂಬಳ, ಇರಲಿಲ್ಲ. ಇದು ಹಿಂದಿನಿಂದ ವಂಶಪಾರಂಪರ್ಯ ವಾಗಿ ಒಂದು ಹುದ್ದೆಯಾಗಿರುತ್ತಿತ್ತು. ಹಾಗೇ ತಮ್ಮ

ಕೆಲಸಕ್ಕೆ ಶ್ಯಾನುಭೋಗರಿಗೆ ಬರುತಿದ್ದ ಪ್ರತಿಫಲ ಮೊದಲನೇ ಸಾವಿರಕ್ಕೆ ಶೇಕಡ ೫ ರಂತೆ ೫೦ ರೂಪಾಯಿ ಎರಡನೇ ಸಾವಿರಕ್ಕೆ ಶೇ ೪ ರಂತೆ ೪೦ ಮೂರನೆಯ ಸಾವಿರಕ್ಕೆ ಶೇಕಡ ೩ ರಂತೆ ೩೦ ರೂಪಾಯಿ ನಾಲ್ಕನೆಯ ಸಾವಿರಕ್ಕೆ ಶೇಖಡ ೨ ರಂತೆ ೨೦ ರೂಪಾಯಿ ಐದನೆಯ ಸಾವಿರಕ್ಕೆ ಶೇಕಡ ಒಂದರಂತೆ ೧೦ ರೂಪಾಯಿ ಒಟ್ಟು ಐದು ಸಾವಿರ ರೂಪಾಯಿ ಒಸಲ್ಮಾಡಿದರೆ ೧೫೦ ರೂಪಾಯಿ ಜೊತೆಗೆ ಕಂಟೆಂಜೆಂಟ್ ಎಂದು ಸುಮಾರು ೪೦ ರೂಪಾಯಿ ಒಟ್ಟು ೧೯೦ ರೂಪಾಯಿ ಹೀಗೆ ಪ್ರತಿಫಲವಾಗಿ ಪಡೆಯುತ್ತಿದ್ದರು.

ಶ್ಯಾನುಭೋಗರು ಅನೇಕರು ನಿಜವಾಗಿ ತುಂಬ ದರಿದ್ರರು ಅವರಿಗೆ ಕೊಡುತ್ತಿದ್ದ ಅಲ್ಪಸಂಬಳ ಅವರ ದಾರಿದ್ರ್ಯ ವೆಚ್ಚ ಹೊಣೆಗಾರಿಕೆ ಇವುಗಳಿಗೆ ಹೋಲಿಸಿ ನೋಡಿದರೆ ಆ ಶ್ಯಾನುಭೋಗರುಗಳಿಂದ ನಡೆದಿರಬಹುದಾದ ಹಣದುರುಪಯೋಗವನ್ನು ನಾವು ಊಹಿಸಬಹುದು.

ಶ್ಯಾನುಭೋಗರು ಲೆಕ್ಕದಲ್ಲಿ ಏನಾದರೂ ಒಳಮರ್ಮ ತಂತ್ರ ಇಟ್ಟೇ ಇಡುತ್ತಾರೆ. ಒಟ್ಟಿಗಲ್ಲದೆ ಶ್ಯಾನುಭೋಗ ಹಳೆ ಕಡತ ಹುಡುಕಿದ ಎಂಬುದು ಒಂದು ಗಾದೆ. ಇದಕ್ಕೆ ಹಳೆಯ ಕಡತದಲ್ಲಿ ಏನಾದರೂ ಸ್ವಾರಸ್ಯವಿರುತ್ತೆ ಎಂದು ಅರ್ಥ ಮಾಡಬಹುದು.

ಶ್ಯಾನುಭೋಗರು ಹಿಂದಿನ ಕಾಲದ ಪ್ರಮುಖ ಅಧಿಕಾರಿಯಾಗಿದ್ದ ಅದರಲ್ಲಿಯೂ ಹಳ್ಳಿಗಳಲ್ಲಿ ಭೂಮಿಗಳ ಲೆಕ್ಕ ಬಹಳ ಸರಿಯಾಗಿ ಇರಬೇಕು. ಅದೇ ನಮ್ಮ ಹಕಿನ ಬಾಳಿನ ಜೀವಾಳ. ಈ ಲೆಕ್ಕಗಳನ್ನು ಇಡುವುದು ಕಷ್ಟ ಗ್ರಾಮ ಪಂಚಾಯಿತಿಗಳಿಗೆ ನಿಯಮಿಸಿರುವ ನೌಕರರನ್ನು ನೋಡುತ್ತಿದ್ದೇವೆ. ಇವರಲ್ಲಿ ಹಿಂದಿನ ಕಾಲದ ಶ್ಯಾನುಭೋಗ ಪಟೇಲರ ಸೇವಾಬುದ್ದಿ ಇಲ್ಲಿ ಇವರಿಗೆ ಯಾವ ಲೆಕ್ಕಕ್ಕಿಲ್ಲ. ಇವರ ಕೈಗೆ ಲೆಕ್ಕದ ಪುಸ್ತಕಗಳು ಹೋದ ಮೇಲೆ ಪುನ ಬೆಳಕನ್ನು ಕಾಣುವುದು ಕಷ್ಟ.

ಶ್ಯಾನುಭೋಗರ ಸ್ಥಾನಕ್ಕೆ ಬರುವ ಹೊಸ ಸರ್ಕಾರಿ ನೌಕರರು ಗ್ರಾಮಸ್ಥರ ಹಿತರಕ್ಷಣೆ ಮಾಡಲೆಂದೂ ಯಾವ ದೋಷಗಳಿಗಾಗಿ ಹಿಂದಲ ಶ್ಯಾನುಭೋಗರನ್ನು ತೆಗೆದು ಹಾಕಿದೇವೋ ಅದೇ ದೋಷಗಳು ಇವರಲ್ಲೂ ಪ್ರಕಟವಾಗದಿರಲೆಂದೂ ನಿರೀಕ್ಷಿಸೋಣ.

"ಗಾಂಪರೊಡೆಯರ ಜೈನ ಯಾತ್ರೆ" ಈ ಪ್ರಬಂಧ ಗುರುಗಳಾದ ಗಾಂಪರೊಡೆಯರು ದೇವರ ಮುಂದೆ ಕೃಷ್ಣನ ಆಸ್ಥಾನದಲ್ಲಿ ಕುಳಿತು ಕಣ್ಣು ಮುಚ್ಚಿಕೊಂಡು ಅಂತರ್ಮುಖರಾಗಿ ಯೋಚಿಸುತ್ತಿದ್ದರು.

ಅವರ ಆಲೋಚನಾ ಪ್ರವಾಹ ಈ ರೀತಿ ಹರಿಯುತ್ತಿದ್ದಿತು. ಈ ಶಿಷ್ಯರಿಗೆ ನಾನು ಅನೇಕ ವರ್ಷಗಳಿಂದ ಇಹಪರಸಾರ್ಥವಾದ ವಿದ್ಯೆಯನ್ನು ಕಲಿಸಿದೆ. ಇದೆಲ್ಲ ಗೋರ್ಕಲ್ಲ ಮೇಲೆ ನಿರ್ಕರೆದಂತೆ ಆಗಿದೆಯೋ ತಿಳಿಯದು. ಮಂಕ ಮೊದಲಿಗಿಂತ ಹೆಚ್ಚು ಮಂಕಾಗಿದ್ದನು. ಮಡೆಯ ಮೊದಲಿಗಿಂತ ಹೆಚ್ಚು ಮಡೆಯನಾಗಿದ್ದಾಣೆ ಮುಟ್ಠಾಳ ಮೊದಲಿಗಿಂತ ಹೆಚ್ಚು ಮುಟ್ಠಾಳನಾಗಿ, ಮೂರ್ಖ ಮೂದಲಿಗಿಂತ ಹೆಚ್ಚು ಮುರ್ಖನಾಗಿದ್ದಾನೆ. ಹಾಗೆಯೇ ಯೋಚಿಸುತ್ತಾ ಗುರುಗಳಿಗೆ 'ಗಾಂಪರೊಡನೆಯನಾದ ನಾನು ಮೊದಲಿಗಿಂತ ಹೆಚ್ಚು ಗಾಂಪನಾಗುತ್ತಿರಬಹುದು? ಇರಬೇಕು ಗುರುವಿನಂತೆ ಶಿಷ್ಯೆ ತೀರ್ಥದಂತೆ ಪ್ರಸಾದ' ಎಂದು ಹೊಳೆಯಿತು.

ಈ ನಡುವೆ ವಕೀಲರ ಒಂದು ಪ್ರಸಂಗ ಪ್ರಮಾಣಿಕತೆ ಚರ್ಚೆ ನಡೆದು ನಂತರ ಶಿಷ್ಯರಿಂದ ನಮಸ್ಕಾರದಿಂದ ಪ್ರಸಂಗವನ್ನು ಹೇಗೋ ಮರೆ ಮಾಚಿಸಿದ ಗಾಂಪರೋಡೆರಿಯರು ಶಿಷ್ಯರೇ ಇಲ್ಲಿ ನೋಡಿ ನಾವು ಇದುವರೆಗೆ ಪಟ್ಟಣಗಳನ್ನು ತಿರುಗೆ ಲೋಕಸಂಗ್ರಹ ಮಾಡಿಕೊಂಡು ಲೋಕನುಭವವನ್ನು ಪಡೆದೆವು. ಇದನ್ನು ಪಾರಮಾರ್ಥಿಕ ದೃಷ್ಟಿಯಿಂದ ನಾವು ಸ್ವಲ್ಪ ದೈವಿಸಂಪತ್ತನ್ನು ಗಳಿಸಿಕೊಳ್ಳಬೇಕಾಗಿದೆ. ರಥಸಪ್ತಮಿಯೆಂದು ನಡೆಯುವ ಗೊರೂರು ರಥೋತ್ಸವಕ್ಕೆ ಹೋಗಿ ಬರೋಣ ಬೆಳಗಿನ ಪ್ರಯಾಣಕ್ಕೆ ಎಲ್ಲವನ್ನು ಸಿದ್ದಗೊಳಿಸಿ.

ಅಂತೆಯೇ ಅರ್ಧರಾತ್ರಿಗೆ ಗುರುಗಳನ್ನು ಸಿದ್ದಗೊಳಿಸಿ ಬಸ್ ನಿಲ್ದಾಣಕ್ಕೆ ಬಂದು ಬಸ್ನ ಕ್ಲೀನರ್ ನೊಂದಿಗೆ ಮಾತನಾಡಿ ನಂತರ ಆತ ಚಹಾ ಕುಡಿಯಲು ತೆರಳಿದಾಗ ಗಾಂಪರ ಶಿಷ್ಯರು ಬಸ್ಸಿನ ಮೇಲೆ ಕುದುರೆಯ ಕಾಲುಗಳನ್ನು ಕಟ್ಟಿ ಮೇಲೆರಿಸುತ್ತಾರೆ ನಂತರ ಕ್ಲೀನರ್‌ಗೆ ತಿಳಿಯದಂತೆ ಬಸ್ಸಿನ ಮೇಲೆ ಕುಳಿತು ವಿನಯವನ್ನು ತೋರಿಸಿ ಗುರುವಿಗೆ ಇನ್ನೇನು ಅರ್ಧಮೈಲಿ ಅನ್ನುವಷ್ಟರಲ್ಲಿ ಇವರು ಮಾಡಿದ ಎಡವಟ್ಟುಗಳು ತಿಳಿದು ಬಸ್ಸಿನಿಂದ ಕುದುರೆಯ ಸಮೇತ ಇಳಿಸಿ ಇವರನ್ನು ಬಿಟ್ಟು ಹೋಗುತ್ತಾರೆ.

ನಂತರ ನಡೆದ ಗೂರೂರಿಗೆ ತಲುಪಿ ಜಾತ್ರೆಯಲ್ಲಿ ಹಲುವ ಎಡವಟ್ಟು ಸೇವೆಗಳನ್ನು ಗಾಂಪರ ಶಿಷ್ಯರು ಮಾಡುತ್ತಾರೆ. ಅದರಲ್ಲಿ ಭಕ್ತ ಪ್ರಹ್ಲಾದನ.

ಹಿರಣ್ಯಕಶಿಪುವಿನ ದೃಶ್ಯಗಳನ್ನು ಮಾಡುತ್ತಿರುವಾಗ ಒಂದು ಮುಖ್ಯ ಸನ್ನಿವೇಶದಲ್ಲೆ ಮುಟ್ಠಾಳ ಮತ್ತು ಮೂರ್ಖರು ತಮ್ಮ ದಡ್ಡತನವನ್ನು ತೋರಿಸಿರುತ್ತಾರೆ.

ಈ ಶಿಷ್ಯರಿಂದ ಇನ್ನು ಏನೇನು ಅನಾಹುತಗಳಾಗುವುವೋ ಎಂದು ಗುರುಗಳು ಬಹಳ ಹೆದರಿದರು. ಅವರ ಅಂಜಿಕೆ ಸುಳಾಗಲಿಲ್ಲ. ರಥವನ್ನು ಎಳೆಯುವಾಗ ಶಿಷ್ಯರ ಚೆಷ್ಟೆಯಿಂದ ಗುರುಗಳ ಪ್ರಾಣವೇ ಹೋಗುವುದರಲ್ಲಿದ್ದಿತು.

"ದ್ಯೂತ ಪ್ರಸಂಗ " ಎಂಬ ಈ ಪ್ರಬಂದವು ಮಾನವನ ಮೂಲಭೂತ ಅದಾವ್ಯ ಸ್ವಭಾವಗಳಲಿ ಜೂಜು ಒಂದು. ಹಾಗಾಗಿಯೇ ಜೂಜಿಗೆ ಒಂದು ದೊಡ್ಡ ಇತಿಹಾಸವಿದ್ದು ಇದರ ಇತಿಹಾಸವನ್ನು ಕೆದುಕುತ್ತ ಹೋದರೆ ವೇದಗಳಿಂದಲೇ ಪ್ರಾರಂಭವನ್ನು ಕಾಣಬಹುದು. ವೇದಗಳಲ್ಲಿಯೇ ಜೂಜಿನ ಮೇಲೆ ಅನೇಕ ವಿನೋದವಾದ ಹಕ್ಕುಗಳು ಇವೆ. ಯಾವಾಗಲೂ ಜೂಜುಗಾರ ಪೂರ್ಣವಾಗಿ ಆಟದ ಅಧೀನನಾಗುತ್ತಾನೆ. ಜೂಜಿಗೆ ಅದರದೇ ನಿಯಮ, ಜೂಜು ಯಾರಿಗೂ ಹೆದರುವುದಿಲ್ಲ. ಆಳಿನಿಂದ ಹಿಡಿದು ಅರಸನವರೆಗೂ ಅದಕ್ಕೆ ತಲೆ ಬಾಗಲೇ ಬೇಕು. ಅಲ್ಲದೇ ಜೂಜು ದೇವತೆಗಳಿಗೆ ಸಹ ಪ್ರಿಯವಾದ ಹವ್ಯಾಸ ಜೂಜು ಚಕ್ರವರ್ತಿಗಳಿಗೆ ಒಂದು ಅನಿವಾರ್ಯ ಮನೋರಂಜನೆಯೂ ಆಗಿ ಜೂಜಿಗೆ ಆಹ್ವಾನಿಸಿದಾಗ ತಿರಸ್ಕರಿಸುವುದು ರಾಜತ್ವದ ಘನತೆಗೆ ಕುಂದವ ಕರೆಯುತ್ತಿದ್ದರು.

ಇನ್ನು ಸಾಮಾನ್ಯ ಜನತೆಯ ಹಬ್ಬ ಉತ್ಸವಗಳಲ್ಲಿ ದೇವರ ಸೇವೆಯಂತೆಯೇ ಜೂಜು ನಡೆದಿರುತ್ತದೆ ಅಲ್ಲಿ ದೇವರ ಪೂಜೆಗೆ ಬಂದರು ಅಥವಾ ಜೂಜಿಗೆ ಬರುವರು ಆ ದೇವರೆ ಬಲ್ಲ.

ಈಗೆ ಒಮ್ಮೆ ಸುರಪುರದ ರಥೋತ್ಸವಕ್ಕೆ ಪದ್ದತಿಯಂತೆ ಭಕ್ತರು ಎಲ್ಲ ಕಡೆಯಿಂದಲೂ ಬಂದು ಸೇರಿದರು. ಅದರಲ್ಲಿ ಬೇರೆ ಬೇರೆ ಊರಿನವರು ರಥೋತ್ಸವ ವೇಳೆಗೆ ಮಾತ್ರ ಬಂದು ಸೇರುತ್ತರೆ. ಜೂಜಿನ ಒಂದು ವಿಶಿಷ್ಟತೆ ಏನೆಂದರೆ ಇಲ್ಲಿ ಯಾವುದೇ ಧರ್ಮದ ಯಾವುದೇ ಜಾತಿ ಎನ್ನದೆ ಎಲ್ಲರು ಸಾಮಾನವಾಗಿ ಸೇರುವುದು. ಸುರಪುರದ ರಥೋಥ್ಸವಕ್ಕೆ ಸೇರಿದ ಜೂಜುಕೋರಲಲ್ಲಿ ನರಸಿಂಹನ ಪ್ರಭಾವ ಅಪಾರ. ನಿತ್ಯ ಜೀವನದಲ್ಲಿ ಅವನೊಬ್ಬ ಬ್ರಾಹ್ಮಣ. ವ್ಯವಸಾಯಗಾರ ಹಿಂದೆ ದೊಡ್ಡ ಜಮಿನ್ದಾರನೂ ಧನಿಕನೂ ಆಗಿದ್ದನು. ಅವನಿಂದ 'ಕೊಟ್ಟವನು ಕೋಡಂಗಿ ಇಸಕೊಂಡವನು ಈರಭದ್ರ ಎಂದು ಕೊಂಡು ನಾನಾ ವಿಧ ಸಹಾಯವನ್ನು ಪಡೆದು ಅವನ ಮಿತ್ರರಾದವರು ಅನೇಕರಿದ್ದರು.

ಸುರಪುರದ ಭಜನಾಮಂದಿರದಲ್ಲಿ ರಥೋತ್ಸವದಹಿಂದಿನ ದಿನ ಸಂಜೆ ಆಟ ತುಂಬಾ ಉತ್ಸಾಹದಿಂದ ನಡೆಯತ್ತದೆ. ನರಸಿಂಹನ ಕೈ ಪದೇ ಪದೇ ಗೆಲುವನ್ನು ಸ್ಪರ್ಶಿಸಿತ್ತು. ಈ ಗಳಿಗೆಯಲ್ಲಿ ನರಸಿಂಹ ಬಾಲ್ಯ ಸ್ನೇಹಿತರಾದ ವೆಂಕಟಚಾಲ ಮತ್ತು ಗೋವಿಂದಾ ಬಂದು ತಮ್ಮ ತಮ್ಮ ಮಗಳ ಮದುವೆ ಹಾಗೂ ಆರೋಗ್ಯದ ಸಮಸ್ಯೆ ಹೇಳಿ ನರಸಿಂಹನಿಂದ ೫೦೦ ಹಾಗೂ ೪೦೦ ರೂ ಸಹಾಯ ಪಡೆದು ನಂತರ ಕೆರೆಯ ನೀರನ್ನು ಕೆರೆಗೆ ಚೆಲ್ಲಿ ಇಬ್ಬರು ಹುಡುಗಿಯರ ಅದೃಷ್ಟವನ್ನು ಜೂಜಾಡಿದ್ದ ನತದೃಷ್ಟ ತಂದೆಯರಾಗಿ ಮರುಗಿದರು. ಇದೆಲ್ಲವೂ ಜೂಜಿನ ಲೀಲೆ ಎಂದರೆ ತಪ್ಪಗಲಾರದು.

"ಅಂತರಾಷ್ಟ್ರೀಯ ಮಹಿಳಾ ವರ್ಷ" ಈ ಪ್ರಬಂಧವು ವರ್ಷದ ೩೬೫ ದಿನಗಳಲ್ಲಿ ಹಲವು ದಿನಗಳನ್ನು ವಿವಿಧ ದಿನಗಳೆಂದು ಆಚರಿಸುತ್ತಾರೆ. ಅಂತೆಯೇ ವರ್ಷಗಳನ್ನು ಆಚರಿಸುತ್ತಾರೆ ಅದರಲ್ಲಿ ಅಂತರಾಷ್ಟ್ರಿಯ ಮಹಿಳಾ ವರ್ಷವೂ ಒಂದು. ಇದನ್ನು ಆಚರಿಸಲು ಯು.ಎಸ್.ಓ. (ಸಂಯುಕ್ತ ರಾಷ್ಟ್ರ ಸಂಸ್ಥೆ) ಕರೆಕೊಟ್ಟಿದೆ.

ವಾಸ್ತವವಾಗಿ ನಮ್ಮಲ್ಲಿ ಸ್ತ್ರೀಯರಿಗೆ ಸ್ವಾತಂತ್ರ ಕಡಿಮೆ ಇಲ್ಲ. ಪುರುಷರಿಗೆ ಇರುವ ಯಾವ ಹಕ್ಕು ಅವಳಿಗೆ ಕಡಿಮೆ ಇಲ್ಲ.

ಪ್ರಾಚೀನ ಕಾಲದಿಂದಲೂ ನಾವು ಸ್ತ್ರೀಯನ್ನು ಆದಿಶಕ್ತಿ ಜನ್ಮದಾತೆ ಅನ್ನಪೂರ್ಣೆ ,ದುರ್ಗಿ, ಚಂಡಿ ಮಾರಿ ಎಂದೆಲ್ಲಾ ಪೂಜಿಸಿ ಗೌರವಿಸುತ್ತೇವೆ. ಗಾಯಿತ್ರಿಯಂತಹ ಮಹಾನ್ ಶಕ್ತಿಯ ಮಂತ್ರಕ್ಕೂ ಸ್ತೀಯ ಅಧಿದೇವತೆ ಇಂತಹ ಮಹಿಳೆಯನ್ನು ಅಬಲೆ ಎಂದೂ ಕರೆಯುವುದು ನಿಜವು ಅಲ್ಲ ಸಾಧುವು ಅಲ್ಲ.

ದೈಹಿಕ ದೃಷ್ಟಿಯಿಂದ ಸ್ತ್ರೀ ಅಬಲೆಯರಂತೆ ಕಂಡರೂ ಅವಳಲ್ಲಿ ಆಗಾಧ ಶಕ್ತಿ ಇರುತ್ತದೆ ಎಷ್ಟು ಸಂದರ್ಭಗಳಲ್ಲಿ ಕುಟುಂಬವನ್ನು ಏಕಾಂಗಿಯಾಗಿ ನಿರ್ವಹಿಸಿ ಯಶಸ್ವಿಯಾಗುತ್ತಾರೆ. ಅಂದರೆ ಮಹಿಳಾ ವರ್ಷ ಎಂಬುದು ಪಟ್ಟಣದ ಶ್ರೀಮಂತರಿಗೆ ಎಂದರೆ ತಪ್ಪಗಲಾರದು ಏಕೆಂದರೆ ಗ್ರಾಮೀಣ ಭಾಗದಲ್ಲಿ ಬಹುತೇಕ ಸ್ತ್ರೀಯರು ಸ್ವತಂತ್ರಿಗಳು ಇದ್ದಾರೆ.

ಸ್ತ್ರೀಯು ಯಾರ ಅವಲಂಬಿಯೂ ಅಲ್ಲ. ಅಬಲೆಯೆಂದು ಬಿಂಬಿಸಿರುತ್ತಾರೆ ಎಂದರೆ ತಪ್ಪಗಲಾರದು ಇದಕ್ಕೆ ಸಾಕಷ್ಟು ಉದಾಹರಣೆಗಳೆ ಇವೆ ಗ್ರಾಮೀಣ ಮಟ್ಟದ ಮಹಿಳಾ ವರ್ಷದ ಸಮಾರಂಭದಲ್ಲಿ ಕೆಲವು ಸ್ತ್ರೀಯರು ನಮಗೆ ಸ್ವಾತಂತ್ರವಿದೆ. ಆದರೆ ಕುಡಿಯುವ ನೀರು ದೀಪಕ್ಕೆ ಎಣ್ಣೆ

ನೀಡಿ ಎಂದು ಪ್ರತಿಭಟಿಸಿದ ಸಾಕಷ್ಟು ನಿದರ್ಶನಗಳಿವೆ. ಅವುಗಳೆಂದರೆ ಅಂಕಪುರದ ಬಳಿಗೆ ಏಳು ಮೂಳದ ಈರಿ ಹೇಳಿದ ಪೂಜಾರಿ ಹಾಗೂ ರಾಮಣ್ಣನ ಮಗ ನರಸಪ್ಪನ ಮಗನ ವಿಷಯವನ್ನು ತಿಳಿದಾಗ ಖಂಡಿತವಾಗಿಯೂ ಸ್ತ್ರೀ ಅಬಲೆ ಅಲ್ಲವೆ ಅಲ್ಲ. ರಾಮಣ್ಣನವರ ಆಸ್ತಿಯನ್ನು ಸೊಸೆಯ ಹೆಸರಿಗೆ ಮಾಡಿದಾಗ ಗಂಡ ಹೆಂಡತಿಯಿಂದ ಜೀವನಾಂಶ ಪಡೆಯಬಹುದೇ? ಎಂಬ ವಿಷಯವನ್ನು ಯಾರು ಯೋಚಿಸಲೇ ಇಲ್ಲ.

ಆದರೆ ಈ ೧೯೭೫-೭೬ ಅಂತರಾಷ್ಟ್ರೀಯ ಮಹಿಳಾ ವರ್ಷದಲ್ಲಿ ಯಾವ ಮಹಿಳೆಯಾದರೂ ಗಂಡು ಪ್ರಾಣಿಗೂ ಜೀವನಾಂಶ ಕೊಡಲು ಒಪ್ಪವಳೆ ಎನ್ನುತ್ತಾರೆ.

"ಒಂದು ಆದಿವಾಸಿಗಳ ಜಾನಪದ ಸಂಸ್ಕೃತಿ " ಎಂಬ ಪ್ರಬಂಧವು ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಸಾಮಾನ್ಯವಾಗಿ ಬುಡಕಟ್ಟು ಜನಾಂಗ ಇದ್ದೆ ಇರುತ್ತದೆ ಅಂತೆಯೇ ನಮ್ಮ ದಕ್ಷಿಣ ಕರ್ನಾಟಕದ ಸೋಲಿಗರಂತೆ ಉತ್ತರ ಭಾರತದ ಛೋಟಾನಾಗಪುರದ ರಾಂಚಿ ಜಿಲ್ಲೆಯ ಗುಡ್ಡಗಾಡಿನ ನಿವಾಸಿಗಳ ಪೈಕಿ ಮುಂಡರೆಂಬ ಒಂದು ಪಂಗಡವಿದೆ. ಇವರ ಸಂಖ್ಯೆ ಅಲ್ಪ ಇವರಿಗೆ ಪ್ರತ್ಯೇಕವಾದ ಭಾಷೆಯಿದ್ದು. ಆದರೆ ಲಿಪಿ ಇಲ್ಲ. ಈ ಭಾಷೆಯು ಸ್ವಲ್ಪ ಹಿಂದಿಯನ್ನು ಹೋಲುತ್ತದೆ. ಇವರ ಹಳ್ಳಿಗಳು ಬೆಟ್ಟಗಳ ತಪ್ಪಲಿನಲ್ಲಿದೆ. ಪ್ರತಿ ಹಳ್ಳಿಗೂ ೨ ಸಾರ್ವಜನಿಕ ಕಟ್ಟಡ ಒಂದು ಹಳ್ಳಿಯ ಬ್ರಹ್ಮಚಾರಿಗಳಿಗೆ ಮತ್ತೊಂದು ಮದುವೆಯಾಗದ ಹುಡುಗಿಯರಿಗೆ ಈ ನಿದ್ರಾಶಾಲೆಗಳಿಗೆ ಗೀಟಿಯೋರಾ ಎಂದು ಹೆಸರು.

ಮುಂಡಾಗಳಿಗೆ ಅಕ್ಷರ ಜ್ಞಾನವಿಲ್ಲದಿದ್ದರೂ , ಲೋಕಾವ್ಯವಹಾರ ಜ್ಞಾನವೂ ಸಂಸ್ಕೃತಿಯ ಕಡಿಮೆ ಇಲ್ಲ. ಲಿಪಿ ಇಲ್ಲದ ಮುಂಡ ಭಾಷೆಯು ಸಾಹಿತ್ಯವನ್ನು  ಪಂಗಡದಲ್ಲಿ ವೃದ್ಧರಾದವರು ಮಾತ್ರವೇ ಹೇಳುವುದಿಲ್ಲ  ಯುವಕರು ಸಹಾ ರಾತ್ರಿಯಿಂದ ಬೆಳಗಿನವರೆಗೆ ಒಂದೇ ಸಮನಾಗಿ ಹೇಳುತ್ತಿರುತ್ತಾರೆ. ಆ ಭಾಷೆಯ ನಾಗರೀಕರಿಗೆ ಅರ್ಥವಾಗದಿದ್ದರೂ, ಅದರಲ್ಲಿ ಒಂದು ವಿಧವಾದ ಸ್ವರಮೇಳ ಧ್ವನಿ ಸಂಯೋಜನೆ ಇರುವುದರಿಂದ ಕೇಳುವುದಕ್ಕೆ ಹಿತವಾಗಿರುತ್ತದೆ. ಮುಂಡಗಳಲ್ಲಿ ಅಸಂಖ್ಯಾತ ಜನಪದ ಕಥೆಗಳು ಪ್ರಚಾರದಲ್ಲಿವೆ. ಇದರಲ್ಲಿ ಕಳ್ಳನು ಕುದುರೆಯನ್ನು ಕದಿಯಲು ಹೋಗಿ ಹುಲಿಯ ಮೇಲೆ ರಾತ್ರಿ ಪ್ರಯಾಣಮಾಡಿ ನಂತರ ನರಿ ಮತ್ತು ಹುಲಿಯನ್ನು ನೋಡಿ ಹೆದರುತ್ತಾನೆ. ಆದರೆ ಇಲ್ಲಿ ಕಳ್ಳ ತನ್ನ ಹುಟ್ಟುಗುಣವನ್ನು ಬಿಡುವುದಿಲ್ಲ.

ಮುಂಡರಲ್ಲಿ ಪ್ರಚಾರದಲ್ಲಿರುವ ಮತ್ತೊಂದು ಬಗೆಯ ಕಥಾ ಸಾಹಿತ್ಯಕ್ಕೆ 'ದುರಂಗ್ ಕಹಾನಿ' ಎಂದು ಹೆಸರು. ಈ ಕಥೆಗಳ ಮಧ್ಯೆ ಮಧ್ಯೆ ಕವನಗಳು ಇರುತ್ತದೆ.

೧ ಕೂ ಕೂ ರೇ ಚೂ

ಬಾಂಡು ನಾ ಮೈ

ಒರಿಬಿಂಗ್ ಜಾನೆ ಚಿ

ಸಾಂಗ್ ಸುರಿ ಜಾನಾ

ಇದರ ಅನುವಾದವನ್ನು ಹೀಗೆ ಮಾಡಬಹುದು.

ಕೋಳಿ ಕೂಹು ಮುಂಚೆ ನಾರಿರೇಳೋ ಮುಂಚೆ!

ನೀರಾಜಿ ಕೇಳೆ ನನ ತಂಗಿ! ನಾನಾದೆ !

ಬೆಟ್ಟದೆಬ್ಬಾವು ಹೇಣ್ಣಾವು ॥

(ಮುಂಡಾ ಭಾಷೆಯಲ್ಲಿ ಬುರುಬಿಂಗ್ ಎಂದರೆ ಗಂಡು ಹಾವು ಸಾಂಗಸುರಿ ಎಂದರೆ ಹೆಣ್ಣು ಹಾವು)

ಇಂತಹ ಕಥೆಗಳಲ್ಲದೆ ಯುವಕರು ಒಗಟನ್ನು ಸಹ ಆಡುತ್ತಾರೆ. ಅಂತಹ ಒಗಟುಗಳು ವಿಶಿಷ್ಟವಾಗಿ ಉತ್ತರಿಸುತ್ತಾರೆ.

ಒಗಟು–೧ ಕುರ್ಚಿಯ ಮೇಲೆ ಐವರು ಸಹೋದರರು ಕುಳಿತಿರುತ್ತಾರೆ. ಕುರ್ಚಿಯನ್ನು ಎಲ್ಲರೂ ಮುಟ್ಟಿದರೂ ಒಬ್ಬರನ್ನೊಬ್ಬರು ಮುಟ್ಟುವುದಿಲ್ಲ.

ಉತ್ತರ:– ಎರಡು ಕಿವಿ , ಎರಡು ಕಣ್ಣು, ಒಂದು ಮೂಗು ಇವೆಲ್ಲ ಕುಳಿತಿರುವ ಕುರ್ಚಿ ತಲೆ

(ಮೋಯಾಡ್ ಮಾಚಿಕೆ ಮಾನ್ರೆ ಹಾಗಾಕೂ ದುಬಾಕಾನಾಕೂ ಜಿಮುಟಡ್ ಕಾಕೂ, ಜೂಡಿಟಿಡ್ ಟಾನಾ)

ಹೀಗೆ ಇವರ ಸಂಸ್ಕೃತಿ ವಿಭಿನ್ನವಾಗಿರುತ್ತದೆ. ಮುಂಡಗಳು ಕಾಡುಜನರಾದರೂ ಅವರಿಗೆ ಲಿಪಿ ಇಲ್ಲದಿದ್ದರೂ ಅವರಲ್ಲಿ ಅಕ್ಷರ ಪಾಂಡಿತ್ಯ ವಿದ್ಯಾವಂತರಿಲ್ಲದ್ದಿದ್ದರೂ ತಮ್ಮ ಜನಪದ ಸಾಹಿತ್ಯ ಜಾನಪದ ಚಟುವಟಿಕೆ ಆಟ ಬುದ್ಧಿ ಶಕ್ತಿಗಳಿಂದಲೇ ಅವರು ನೀತಿಗಳನ್ನು ಕಲಿಯುತ್ತಾರೆ.

---

ಅಡಿಟಿಪ್ಪಣಿ : ಹೆಳೆಯಪಳೆಯಮುಖಗಳು ಪ್ರಬಂಧ ಸಂಕಲನ. ಪುಟ ಸಂಖೆ ೧೬ಗೊರೂರರು ರಾಮಸ್ವಾಮಿ ಅಯ್ಯಂಗಾರ್

'ಬಾಬಾ ಪ್ರಭಾವ' ಎಂಬ ಈ ಪ್ರಬಂಧವು ಆಧುನಿಕ ಕಾಲದ ಹಾಗೂ ಹಿಂದಿನ ಕಾಲದ ಕೆಲವರಿಗೆ ನಿತ್ಯ ಒಂದು ಹೊಸ ಮಾದಕ ವಸ್ತು ಬೇಕಾಗುವಂತೆ ಪದೇ ಪದೇ ಹೊಸದೇವರುಗಳು ಹೊಸ ಸಾಧುಸಂತರು ಸ್ವಾಮಿಗಳು ಪವಾಡ ಪುರುಷರು ಬೇಕಾಗುತ್ತಾರೆ. ನಮ್ಮ ಹಳೆಯ ಸಾಧುಗಳು ಮಂಡಿಯಿಂದ ಮೇಲಕ್ಕೆ ಒರಟಾದ ಕಾವಿ ಬಟ್ಟೆಯನ್ನು ಸುತ್ತಿಕೊಳ್ಳುತ್ತಿದ್ದರು.

ಹೊಸ ಸ್ವಾಮಿಗಳು ಪಿತಾಂಬರ ವರ್ಣ ರೇಷ್ಮೆಯಲ್ಲಿ ಕ್ವೀನ್ ಆಣೆ ಕಾಲದ ಸುತ್ತಿ ನಾಲ್ಕಾರು ಜನ ಎತ್ತಿಕೊಂಡು ಹೋಗಬೇಕಾದ ದನಿಕ ಮಹಿಳೆಯರ ವಿವಾಹದ ಉಡುಪಿನಂತೆ ಭೂಮಿಯ ಮೇಲೆ ಎಳೆದುಕೊಂಡು ಹೋಗುವ ಹೊಲಿದ ಲಂಗ ತೊಟ್ಟಿಹೊಗುತ್ತಾರೆ. ಅಂತೆಯೇ ನಮ್ಮೂರಿನ ನರಸಿಂಹ ಅವನೊಬ್ಬ ಪಂಚರಂಗಿ ಎಂದರೇ ಆನೇಕ ಸಲ ಜೈಲಿಗೆ ಹೋದವನು ಎಂದರ್ಥ. ಆದರೆ ನರಸಿಂಹ ಜೈಲಿಗೆ ಹೋದವನಲ್ಲ ಅವನು ಅನೇಕ ಉದ್ಯೋಗಗಳನ್ನು ಮಾಡಿ ಯಾವುದರಲ್ಲಿಯೂ ಜಯ ಶೀಲನಾಗದಿರುವುದರಿಂದ ಅವನಿಗೆ ಆ ಹೆಸರು ಬಂದಿದೆ. ಇಂತಹ ನರಸಿಂಹನು ಪ್ರಾಥಮಿಕ ಶಾಲೆಯ ಉಪಾಧ್ಯಾಯನಾಗಿದ್ದನು.

ಪಾಠಶಾಲೆಯ ಬಾಗಿಲನ್ನೇ ತೆಗೆಯದೆ ಎರಡು ಮೂರು ವರ್ಷ ಸಂಬಳ ತೆಗೆದುಕೊಂಡ ನಂತರ ಗ್ರಾಮಸ್ಥರೆ ಅವನನ್ನು ಊರಿಂದ ಓಡಿಸಿದರು. ಅನಂತರ ಅವನು ಶಿಕ್ಷಣ ಕಾರ್ಯವನ್ನು ಬಿಟ್ಟು ಜಮೀನನ್ನು ಗುತ್ತಿಗೆ ಹಿಡಿದು ವ್ಯವಸಾಯ ಮಾಡಲು ಪ್ರಾರಂಭಿಸಿದ. ಬಂಧುಗಳ ಜಮೀನನ್ನೇ ಮಾಡಿಕೊಂಡ. ವ್ಯವಸಾಯ ಕಷ್ಟವಾದ ಕಸುಬು. ಅವನಿಗೆ ಅದರಲ್ಲಿಯೂ ನಷ್ಟವಾಯಿತು. ಭೂಸುಧಾರಣಾ ಕಾನೂನು ಆಗುವುದಕ್ಕೆ ಮುಂಚೆಯೆ ತಾನೇ ಸ್ವಯಂ ಘೋಷಿಸಿಕೊಂಡು ಮಾಲೀಕರ ಭೂಮಿಗಳನ್ನು ಕೆಲವು ಪಟಿಂಗರಿಗೆ ಆಧಾರ –ಭೋಗ್ಯ ಮಾಡಿಬಿಟ್ಟ ನಂತರ ಸಣ್ಣಪುಟ್ಟ ಕಂಟ್ರಾಕ್ಟರ್‌ಗಳನ್ನು ಹಿಡಿದ.ಇದರಿಂದ ಸ್ವಲ್ಪ ಹಣಕಾಸು ಅವನಿಗೆ ಸಿಕ್ಕುತ್ತಿದ್ದರು.

ಹಳ್ಳಿಯ ಶಾಲೆಗಳು ಪಂಚಾಯ್ತಿ ಕಟ್ಟಡಗಳು. ಸಣ್ಣಪುಟ್ಟ ಸಹಕಾರ ಸಂಘಗಳ ಕಟ್ಟಡಗಳು ಇಂತಹ ಕಟ್ಟಡಗಳನ್ನು ನಿರ್ಮಿಸಿದ ಆದರೆ 'ಬಿಲ್ ಆಗುವವರೆಗೆ ಕಟ್ಟಡ ಇದ್ದರೆ ಸಾಕು' ಎಂಬುದಷ್ಟು ಆಗಿತ್ತು. ಇಂತಹ ಹಲವಾರು ಅವಘಡಗಳನ್ನು ಸೃಷ್ಟಿಸಿಕೊಂಡ ನರಸಿಂಹನು ನಂತರ ತನ್ನ ಕುಟುಂಬದಲ್ಲಿ ಸಮಸ್ಯೆಗಳನ್ನು ಸೃಷ್ಟಿಸಿಕೊಂಡು ಕೊನೆಯಲಿ ನರಸಿಂಹ 'ಕೆಟ್ಟು ಪಟ್ಟನ ಸೇರು' ಎಂದು ಗಾದೆಯಂತೆ ಜಿಲ್ಲಾ ಮುಖ್ಯ ಪಟ್ಟಣವನ್ನು ಸೇರಿದ ಅಲ್ಲಿಯೂ ಸಹ ಮೂಢ ಭಕ್ತರನ್ನು ನಂಬಿಸಿ ನಂತರ ಬಾಬ

ಎಂದು ಜನರಿಗೆ ತುಂಬ ಪರಿಚಯವಾದ .ಇದರಿಂದ ಅವನಿಗೆ 'ಬಾಬ ನರಸಿಂಹ' ಎಂದೇ ಹೆಸರಾಯಿತು.

ಅಲ್ಲಿಂದ ಮುಂದೆ ನರಸಿಂಹ ತನ್ನ ಯಾವ ಹೊರೆಯನ್ನು ಹರಿಹರ ಬಾಬರ ಮೇಲೆ ಹಾಕುತ್ತಿದ್ದ. ನಂತರ ಭಕ್ತಿಯ ಪರಾಕಷ್ಟೆಯೂ ತನ್ನ ಹಳೆಯ ಸೈಕಲ್ ಚಕ್ರದಲ್ಲಿ ಬಾಬನನ್ನು ಕಂಡು ಬಂದು ಹೊಸ ಅಲೆಯನ್ನು ಸೃಷ್ಟಿಸಿ ತನ್ನ ಭಕ್ತರ ಅನಾರೋಗ್ಯವನ್ನೆ ಬಾಬರು ವಿಭೂತಿಯಿಂದಲೇ ವಾಸಿ ಮಾಡಿದೆ ಎಂದು ಹೇಳಿ ವ್ಯಾಪಕ ಪ್ರಚಾರ ಪಡೆದಿದ್ದನು. ಆದರೆ ಅಲ್ಲಿ ವಾಸ್ತವವೆ ಬೇರೆಯಾಗಿತ್ತು. ಈಗ ಸಾಕಷ್ಟು ಬೆಳವಣಿಗೆ ಕಂಡ ಸೋಮಾರಿ ಬಾಬ ಮಾತನ್ನೇ ಬಂಡಾವಳವನ್ನಾಗಿ ಮಾಡಿಕೊಂಡು ಬದುಕು ಸಾಗಿಸುತ್ತಿದ್ದನು. ನರಸಿಂಹನೊಂದಿಗೆ ಈಗ ಯಾರೂ ಮಾತನಾಡುವುದು ಸುಲಭವಲ್ಲ ವಿದ್ಯೂತ್ ದೀಪ ಸರಿಮಾಡುವವರನು ಒಂದು ಲೈನು ನೋಡಿ ಹೊಸ ದೀಪ ಹಾಕಲೇ ಎಂದು ವಿಚಾರಿಸಿದರೂ ನರಸಿಂಹ ತಾಳಿ ಬಾಬರನ್ನು ಕೇಳಿಕೊಂಡು ಬರುತ್ತೇವೆ. ಎಂದು ಹೇಳುವ ಬಾಬನ ಭಕ್ತ 'ಬಾಬ ನರಸಿಂಹ' ಭಕ್ತನಾಗಿ ಉಳಿಯುತ್ತಾನೆ.

'ಗಾಂಧೀಜಿ ಸಾನ್ನೀದ್ಯದಲ್ಲಿ ವಿನೋದ ನಿಮಿಷಗಳು' ಈ ಪ್ರಬಂಧವು ಗಾಂಧೀಜೀ ಭಾರತಕ್ಕೆ ಸ್ವರಾಜ್ಯವನ್ನು ಸಂಪಾದಿಸಿಕೊಟ್ಟದು ಮಾತ್ರವಲ್ಲದೆ ಭಾರತೀಯರ ಮೇಲ್ಮೈಗಾಗಿ ಎಲ್ಲ ಕ್ಷೇತ್ರಗಳಲ್ಲಿಯೂ ದುಡಿದು ಮಾರ್ಗದರ್ಶನವನ್ನು ಬಿಟ್ಟು ಹೋಗಿದ್ದಾರೆ. ಅವರ ಅನೇಕ ಗುಣಗಳ ಪೈಕಿ ಅನಾಸಕ್ತಿಯ ಮುಖ್ಯವಾದ್ದಿತು. ಆ ಅನಾಸಕ್ತಿಯ ಫಲವಾಗಿ ಅವರು ಜೀವನ ಸಂಗ್ರಾಮವನ್ನು ಬಹಳ ಹಗುರವಾದ ಮನಸ್ಸಿನಿಂದ ತಾವರೆ ಎಲೆಯ ಮೇಲಿನ ನೀರಿನ ಹನಿಯ ಉಪಮಾನದಂತೆ ಸರಾಗವಾಗಿ ನಡೆಸಿಬಿಟ್ಟರು. ಅನಾಸಕ್ತಿಯುಳ್ಳವರಿಗೆ ಮಾತ್ರ ಹಾಸ್ಯ ಪ್ರಕೃತಿ ಸಾಧ್ಯ ಆಸಕ್ತನಾದವನು ಕಾಮಕ್ರೋಧಮೋರಿತನು. ಮಿತಿ ಮೀರಿ ಭಾವಪರವಶನೂ ಆಗಿ ಸಮತ್ವವನ್ನು ಕಳೆದುಕೊಳ್ಳುತ್ತಾನೆ. ಮಹಾತ್ಮ ಗಾಂಧೀಯವರ ಅದ್ಭುತ ಸಾಧನೆಗೆ ಅವರವರ ವಿನೋದ ಪ್ರಕೃತಿಯು ಬಹು ಮಟ್ಟಿಗೆ ಸಹಾಯವಾಗಿತ್ತು.

ಒಂದು ಸಲ ಗಾಂಧೀಜಿ ಒಬ್ಬ ಪ್ರಚಾರಶೀಲ ವೈದಿಕರ ಮನೆಯಲ್ಲಿ ಉಳಿದಿದ್ದರು ಈ ಗೃಹಸ್ಥನ ಪತ್ನಿ ತುಂಬಾ ಮತಿನಿಷ್ಠೆಯವಳು. ಅಲ್ಲಿಗೆ ಗಾಂಧೀಜಿಯವರಲ್ಲಿ ನೋಡಲು ಹೂಣ ಜನಾಂಗದ ಪೆರಿಯರ್ ಎಲ್ವಿನ್ ಪಾತ್ರಿ, ಬಂದರು. ನಂತರ ಸಾಕಷ್ಟು ಮಹಿಳೆಯ ಜೊತೆಗಿನ ಮಾತನಾಡಿ ನಂತರ

ಸೂಕ್ಷ್ಮವಾಗಿ ಪರಿಸ್ಥಿತಿಯನ್ನು ನಿಯಂತ್ರಿಸಿದ್ದು ಬಂಡಾಯಗಾರ ಕೃಪಲಾಗಿ ಮುಸುಕಿ ಉಜ್ಜಿದುದು ಎಲ್ಲವು ಗಾಂಧೀಜಿಯ ಆದರ್ಶವೆಂದರೆ ತಪ್ಪಾಗಲಾರದು.

"ದುಂಡುಮೇಜು ಪರಿಷತ್ ಮಾರ್ಗ" ಈ ಪ್ರಬಂಧ ೧೯೩೧ ರಲ್ಲಿ ಗಾಂಧೀಜಿ ದುಂಡುಮೇಜಿನ ಎರಡನೆಯ ಪರಿಷತ್ ನಲ್ಲಿ ಭಾಗವಹಿಸಲು ಲಂಡನ್ನಿಗೆ ಹಡಗಿನಲ್ಲಿ ತೆರಳಿದರು. ಅವರ ಜೊತೆಯಲ್ಲಿ ಘನಶ್ಯಾಮದಾಸ್ ಬಿರ್ಲಾರ್. ಪಂಡಿತ ಮದನ ಮೋಹನ ಮಾಲವೀಯ ಶ್ರೀ ಮತಿಸರೋಜಿನಿ ನಾಯ್ಡು ಮತ್ತು ಅವರ ಪರಿವಾರದವರು ಆದ ಮಹದೇವದೇಸಾಯಿ ಮುಂತಾದವರ ಜೊತೆ ಇಗ್ಲೀಂಡಿಗೆ ತೆರಳಿದ್ದರು. ಈ ನಡುವೆ ಅವರ ಚರ್ಮದ ಬ್ಯಾಗಿನ ಬಗ್ಗೆ ಸಾಕಷ್ಟು ಚರ್ಚೆಗಳು ತಮ್ಮೊಳಗೆ ನಡೆದಿದ್ದು ಇಲ್ಲಿ ಸಹ ಸಾಕಷ್ಟು ವಿನೋದ ಹಾಸ್ಯ ಪ್ರವೃತಿಯ ಆಗುತ್ತಿತ್ತು.

"ರೈಲ್ವೆ ಅಪಘಾತದಲ್ಲಿ" ಈ ಪ್ರಬಂಧ ರೈಲು ಬೊಂಬಾಯಿಂದ ಡಿಲ್ಲಿಗೆ ಪೂರ್ಣ ವೇಗದಿಂದ ಸಾಗಿ ದಾರಿ ಮಧ್ಯ ಅಪಘಾತವಾಗಿ ನಂತರ ರೈಲಿನ ಪ್ರಯಾಣಿಕರ ನಡುವೆ ನಡೆದ ಚರ್ಚೆಗಳು ಸಹ ವಿನೋದ ಹಾಸ್ಯಪಾಯಾ ರೀತಿಯಲ್ಲಿ ನಡೆಯಿತು. ಇದರಿಂದ ಗಾಯಗೊಂಡಿದ್ದ ಕೆಲವು ಪ್ರಯಾಣೀಕರು ತಮ್ಮ ನೋವುಗಳನ್ನು ಮರೆತಿದ್ದರು.

ಒಂದು ಸಲ ನೂರಾರು ಹರಿಜನ ಯುವಕರು ಸಾಬರಮತಿ ಆಶ್ರಮದೊಳಕ್ಕೆ ನುಗ್ಗಿ ಎಲ್ಲಾ ಕೊಠಡಿಗಳಿಗೂ ನುಗ್ಗಿ ದಾಂದಲೇ ಎಬ್ಬಿಸಿದರು. ಇದನ್ನು ಗಾಂಧೀಜಿ ಶಾಂತಿರೀತಿಯಿಂದಲೇ ಸ್ವಿಕರಿಸಿದರು. ಈ ನಡುವೆ ಗಾಂಧೀಜಿ ಕಸ್ತೂರಿಬಾ ಗೆ ಎಲಿ ನಿನ್ನ ಕೊಠಡಿಯಲ್ಲಿ ಬಿಟ್ಟುಕೊಡು ಎಂದು ಹೇಳಿದರು. ಆದರೆ ಕಸ್ತೂರಿ ಬಾ ಆ ಅವ್ಯವಸ್ಥಿ ಗುಂಪನ್ನು ನೋಡುತ್ತಾ ಇವರು ನನ್ನ ಮಕ್ಕಳು ಬೇಕಾದರೆ ನಿಮ್ಮ ಮಕ್ಕಳಿಗೆ ನಿಮ್ಮ ಕೂಠಡಿಯನ್ನು ಬಿಟ್ಟುಕೂಡಿ ಎಂದರು. ಕೊನೆಯಲ್ಲಿ, ಕಸ್ತೂರಿ ಬಾ ಅವರೆ ಎಲ್ಲರಿಗೂ ಅಡಿಗೆ ಮಾಡಿ ಬಡಿಸಿದರು. ಹರಿಜನರಿಗೆ ಗಾಂಧೀಜಿಗಿಂತ ಬೇರೆ ಮಿತ್ರರಿಲ್ಲ ಎಂದುಕೊಂಡರು. ಹರಿಜನರು ತಮ್ಮ ಸ್ಥಳಗಳಿಗೆ ಹಿಂತಿರುಗಿದರು. ಇಲ್ಲಿ ಗಾಂಧೀಜಿಯ ಮಾನವೀಯ ಗುಣ ಮನುಷ್ಯನಿಗೆ ಮನುಷ್ಯನಾಗಿಯೇ ಒಂದು ಮೌಲ್ಯವಿದೆ.

ಇದು ಅವನ ಜಾತಿ ಕುಲ, ಬುಡಕಟ್ಟು, ದೇಶ, ವರ್ಣ, ಐಶ್ವರ್ಯ ಇವುಗಳಲೆಲ್ಲದ್ದರಿಂದ ಬೇರೆಯಾದವು ಮತ್ತು ಇವೆಲ್ಲವನ್ನು ಮೀರಿದುದು. ಪ್ರತಿಯೊಬ್ಬ ಮಾನವನರಲ್ಲಿ ಸಮಾನವಾಗಿರುವ

ಹಸಿವು, ಬಾಯಾರಿಕೆಗೆ, ನೋವು, ಪ್ರೀತಿ, ಈ ಗುಣಗಳಿಗಾಗಿಯೇ ಮಾನವನನ್ನು ಪ್ರೀತಿಸುವುದು. ಮಾನವೀಯತೆಯ ಹಕ್ಕು ಎಂದು ಸಾರಿದರು.

ಗಾಂಧೀಜಿ ತಮ್ಮ ಬದುಕಿನುದ್ದಕ್ಕೂ ಗ್ರಾಮಗಳ ಉದ್ಧಾರ ಸ್ತ್ರೀಯರ ಸ್ಥಾನಮಾನ ಮುಂತಾದವುಗಳಿಗೆ ಹೋರಾಡಿ ಮಹತ್ಮರೆನಿಸಿಕೊಂಡರು.

"ವಿರೋಧಭಾಸ" ಪ್ರಬಂಧವು ಬಸ್ಸನ್ನು ಕಾಯುತ್ತ ಅರ್ಧಗಂಟೆಯಿಂದ ನಾನು ನಿಂತಿದ್ದರು ಬಸ್ಸು ಬಂದ ತಕ್ಷಣ ಹಿಂದೆ ಇದ್ದವರು ನನ್ನನ್ನು ತಳ್ಳಿ ತಾವು ಮುಂದೆ ಹೋಗಿ ಕುಳಿತಿದ್ದರಿಂದ ನಾನು ಪದ್ಧತಿಯಂತೆ ಬಸ್ಸಿನಲ್ಲಿ ನಿಂತುಕೊಂಡೆ. ಹಾಸನಕ್ಕೆ ಪ್ರಯಾಣ ಮಾಡಬೇಕಿತ್ತು. ನನ್ನಂತೆಯೇ ಬಸ್ಸಿನಲ್ಲಿ ಇನ್ನೂ ಹಲವಾರು ಜನ ನಿಂತಿದ್ದರು. ಎಲ್ಲರ ಭಾವನೆಯಲ್ಲೂ ಕುಳಿತವರ ಮೇಲೆ ನಿಂತವರಿಗೆ ಅಸಮಾಧಾನ ಇದ್ದೇ ಇತ್ತು. ಯಾಕೆಂದರೆ ನಿಂತಿದ್ದ ವಯಸ್ಸದವರಿಗಾಗಲೀ, ಹೆಂಗಸರು ಮಕ್ಕಳಿಗಾಗಲೀ ಎದ್ದು ಸ್ಥಳಬಿಟ್ಟು ಕೊಡುವ ಗೊಜಿಗೆ ಹೋಗಲೇ ಇಲ್ಲ.

ಹೀಗೆ ಪ್ರಯಾಣ ಸಾಗುತ್ತಿರಲು ನನ್ನಂತೆಯೇ ನನ್ನ ಮುಂದುಗಡೆ ಯುವಕನೊಬ್ಬನು ನಿಂತಿದ್ದ ಬಹುತೇಕ ಅವನು ಪ್ರಯಾಣದುದ್ದಕ್ಕೂ ನನ್ನನ್ನೂ ಪ್ರೀತಿಯಿಂದಲೇ ಕನಿಕರದಿಂದ ನನ್ನನ್ನೂ ಮತ್ತು ಕುಳಿತವರನ್ನು ನೋಡಿ ನನ್ನ ಮುಖವನ್ನು ಕನಿಕರದಿಂದ ನೋಡುತ್ತಿದ್ದ. ಅವನ ನೋಟವು ನನ್ನ ಮೇಲೆ ಕನಿಕರದಿಂದಲೇ ಇತ್ತು. ಬಹುಶ; ಅವನೇನಾದರೂ ಕುಳಿತಿದ್ದರೆ ಅವನು ನನಗೆ ಸೀಟು ಬಿಡುತ್ತಿದ್ದನೋ ಏನೋ. ಏನು ಮಾಡುವುದು ಆತನೇ ನಿಂತಿದ್ದಾನೆ.

ಆತನು ನಿಂತಿದ್ದಾನೆ ನಂತರ ನಾವು ಇಳಿಯುವ ನಿಲ್ದಾಣ ಬಂದಾಗ ಅವನು ಮುಂದೆ ಇಳಿಯುತ್ತಿರಲು ಕೊನೆಯಲ್ಲಿ ನಾನು ಇಳಿಯಬೇಕೆಂದು ಹೆಜ್ಜೆ ಇಟ್ಟಾಗ ನನ್ನ ಮುಂದೆ ನಿಂತಿದ್ದ ಅಪರಿಚಿತ ಯುವಕ ಕೂಡಲೇ ನನಗೆ ನಮಸ್ಕಾರ ಮಾಡಿ ನನ್ನ ಎರಡು ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಬಿಟ್ಟನು. ಇಂತಹ ಅನೀರಿಕ್ಷಿತ ಘಟನೆಯಿಂದ ಬೆಚ್ಚಿದ ನಾನು ಆತನಿಂದ ಬಿಡಿಸಿಕೊಂಡು ಬಸ್ಸಿನಿಂದ ಇಳಿದ ನಂತರ ಆ ಯುವಕನ ಜೊತೆಗೆ ಇದ್ದವರನ್ನು ಆತನ ಬಗ್ಗೆ ವಿಚಾರಿಸಲಾಗಿ ಅವರು ಇವರಿಗೆ ಸ್ವಲ್ಪ ತಲೆ ಸರಿಯಾಗಿಲ್ಲ. ಇವನು ಎಲ್ಲರಿಗೂ ಹಾಗೇ ಮಾಡುತ್ತಾನೆ ಆದ್ದರಿಂದ ನಿಮಗೂ ಹಾಗೇ ಮಾಡಿದ, ಏನು ತಿಳಿದುಕೊಳಬೇಡಿ ಎಂದಾಗ ನನಗೆ ಕಪಾಳಕ್ಕೆ ಏಟು ಬಿದ್ದರು ನಾನು ಬೆಚ್ಚಿ ಬಿಳುತ್ತಿರಲಿಲ್ಲ ಹಾಗಾಗಿ ಹೋಯಿತು.

ಮತ್ತೆ ಯುವಕನು ಮೊದಲಿನಂತೆಯೇ ನನ್ನನ್ನು ನೋಡಿದಾಗ ಬಹುಶ: ನನ್ನನ್ನು ಆತನ ತರಗತಿಗೆ ಸೇರಿಸಿಕೊಂಡಿರಬಹುದು ಎಂದೆನಿಸಿತು. ಈ ಒಂದು ವಿರೋಧಬಾಸವು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಚಿತ್ರಿತವಾಗಿದೆ ಎಂದರೆ ತಪ್ಪಾಗಲಾರದು.

ಒಟ್ಟಾರೆಯಾಗಿ ಗೊರೂರರ ಪ್ರಬಂಧಗಳಲ್ಲಿ ಗೊರೂರರು ಗಂಭೀರ ಪ್ರಬಂಧಗಳನ್ನು ಬರೆಯಬಲ್ಲರು ಹಾಗೂ ಅಂಥ ವಿಷಯಗಳನ್ನು ಸೂಕ್ಷ್ಮವಾಗಿ ಆಳವಾಗಿ ವಿಶ್ಲೇಷಿಸಿ ಮನದಟ್ಟು ಮಾಡಿಕೊಡಬಲ್ಲರು ಎಂಬುದಕ್ಕೂ ಅವರ ಪ್ರಬಂಧಗಳು ಸಾಕ್ಷಿಯಾಗಿ ದೊರೆಯುತ್ತದೆ. ಗೊರೂರರ ಸಾಹಿತ್ಯದಲ್ಲಿ ಮಿತಿಗಳು ಬಂಬಿಲ್ಲ. ಅವರು ಬದುಕಿನ ಸುಮುಖವನ್ನೇ ಹೆಚ್ಚಾಗಿ ಕಂಡು ಕಂಡರಿಸಿದ್ದಾರೆ. ಅವರ ಕಣ್ಣಗಳು ಬಾಳಿನ ಸಾಮಾನ್ಯ ಸರಳಸಂಗತಿಗಳನ್ನು ಆರಿಸಿಕೊಳ್ಳುತ್ತದೆಯೇ ಹೊರತು ಗಹನವಾದುದು ಅನ್ವೇಷಣೆ ಪ್ರಯತ್ನಿಸುವುದಿಲ್ಲ. ಅದರಿಂದ ಜೀವನದ ಎಲ್ಲ ಸ್ತರಗಳ ದರ್ಶನವಾಗುತ್ತದೆ.

ಗೊರೂರರ ಬರವಣಿಗೆ ಅಪರೂಪವಾಸದುದು ಮತ್ತು ಅವರಿಗೆ ಅನುರೂಪವಾದದ್ದು. ಅದರೆ ಅವರ ಬರವಣಿಗೆಯಲ್ಲಿ ಸಿಂಹಪಾಲು ದೊರೆತದ್ದು ಹಳ್ಳಿಯ ಜೀವನಕ್ಕೆ ಎಂಬುದನ್ನು ಮರೆಯುವಂತಿಲ್ಲ.

## ಅಧ್ಯಾಯ – ೫

## ಎ.ಎನ್.ಮೂರ್ತಿರಾವ್ ರವರ ಪ್ರಬಂಧ ಸಾಹಿತ್ಯದ ಸ್ವರೂಪ

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಪ್ರಬಂಧ ಸಾಹಿತ್ಯಕ್ಕೆ ಒಂದು ವಿಶಿಷ್ಟಸ್ಥಾನ ನೀಡಿ ಅವರ ಪೋಷಣೆಗೆ ಕಾರಣವಾದವರು ಎ.ಎನ್.ಮೂರ್ತಿರಾವ್ ಸಮಾಜಕ್ಕೆ ಒಳ್ಳೇ ಬರವಣಿಗೆ ವೈಚಾರಿಕ ನೀಲೆಗಟ್ಟನ್ನು ತನ್ನ ಅಡಿಗಟ್ಟನಾಗಿ ಮಾಡಿಕೊಂಡಿದೆ. ಆದರೆ ಅವರ ಪ್ರಬಂಧ ಸಾಹಿತ್ಯವು ಸಾಮಾಜಿಕ, ಸಾಂಸಾರಿಕ, ಪ್ರಾಕೃತಿಕ ಮುಂತಾದ ಆಯಾಮಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಅವರ ಪ್ರಬಂಧಗಳು ವಸ್ತು ನಿಷ್ಠತೆಯಿಂದಕೂಡಿದ್ದು ನೇರವೂ, ಸ್ಪಷ್ಟವೂ ಆಗಿವೆ. ತಮ್ಮ ಅನಿಸಿಕೆಗಳನ್ನು ಹಿಂದುಮುಂದು ನೋಡದೆ ಅಭಿವ್ಯಕ್ತಗೊಳಿಸುವ, ಯಾವುದನ್ನು ನಿರ್ಬಿತಿಯಿಂದ ಹೇಳುವ ಅವರ ಗುಣ ಅವರನ್ನು ಒಬ್ಬ ಶ್ರೇಷ್ಠ ಪ್ರಬಂಧಕಾರರನ್ನಾಗಿ ರೂಪಸಿವೆ.

ಪ್ರಬಂಧ ಮನಸ್ಸಿಗೆ ಸಹಜವೆನಿಸಿದ ವಿಚಾರಭಾದೆಯನ್ನು ಒಳಗೊಂಡಾಗ ಅಂದರೆ ನಮಗೆ ತೀರ ಸಮೀಪವಾದಾಗ ಪ್ರಿಯವಾಗುತ್ತದೆ. ಮೂರ್ತಿರಾಯರ ಪ್ರಬಂಧಗಳ ಇಂಹದೇ ಆಗಿದೆ ಇದಕ್ಕೆ ಕಾರಣ ಅವರ ಆಳವಾದ ಅನುಭವ ಮತ್ತು ಅವರೇ ತಮಗಿರುವುದಾಗಿ ಹೇಳಿಕೊಂಡಿರುವ ಸಹಾನುಭೂತಿ ಮೇಲಾಗಿ ವೈಚಾರಿಕತೆಗೂ ಅವರ ಮಹತ್ವಕೊಡುವುದರಿಂದ ಅನೇಕರಿಗೆ ಪ್ರಿಯವಾದ ವ್ಯಕ್ತಿಯಾಗಿದ್ದಾರೆ. ತಮ್ಮ ಅನಿಸಿಕೆಗಳನ್ನು ಹಿಂದುಮುಂದು ನೋಡದೆ ಅಭಿವ್ಯಕ್ತಿಗೊಳಿಸುವ ಯಾವುದನ್ನು ನಿರ್ಭೀತಿಯಿಂದ ಹೇಳುವ ಅವರ ಗುಣ ಅವರನ್ನು ಒಬ್ಬ ಶ್ರೇಷ್ಠ ಪ್ರಬಂಧಕಾರರನ್ನಾಗಿ ರೂಪಸಿವೆ.

ಮೂರ್ತಿರಾಯರು ಕೃಷಿಯನ್ನು ಮಾಡಿರುವುದನ್ನು ಕಾಣಬಹುದು, ಅದರಜೊತೆಗೆ ತಮ್ಮ ಬರವಣಿಗೆಯ ಮೂಲಕ ಓದುಗರನ್ನು ಚಿಂತನೆಗೆ ಒಳಪಡಿಸುವ ಕ್ರಿಯೆಯನ್ನು ನಾವು ಕಾಣಬಹುದು.

ಮೂರ್ತಿಯವರ ಪ್ರಬಂಧಗಳಲ್ಲಿ ಗೂಢವಾಗಿಯೋ, ವ್ಯಕ್ತಿಯಾಗಿಯೋ ಪ್ರಕಟವಾಗುವ ಅಂಶವನ್ನು ನಾವು ಗುರುತಿಸಲು ಹೊರಟಾಗ ಅಲ್ಲಿ ಕಾಣುವುದು ಮೂರ್ತಿಯವರ ಮನೋಧರ್ಮ, ವೈವಿಧ್ಯಮಯ ಅಭಿರುಚಿ, ಮನಶಾಸ್ತ್ರೀಯ ವಿವರಣೆ, ಮಾನವನ ಮನಸ್ಸಿನ ಒಳನೋಟ, ಕೌಟುಂಬಿಕ ಪ್ರಸಂಗಗಳು, ಸಮಾಜ, ರಾಜಕಾರಣಗಳು ಇಂತಹ ಸೂಕ್ಷ್ಮಾತಿಸೂಕ್ಷ್ಮ ಅಂಶಗಳು ಮೂರ್ತಿರಾವ್ ಅವರು

ಮೂರು ಪ್ರಬಂಧ ಸಂಕಲನಗಳನ್ನು ಸಮಗ್ರಲಲಿತ ಪ್ರಬಂಧಗಳು ಎಂಬ ಹೆಸರಿನಿಂದ ಪ್ರಕಟವಾಗಿದ್ದು ಮೂರು ಸರಳುಗಳಿಂದ ಒಟ್ಟು ೩೬ ಪ್ರಬಂಧಗಳನ್ನು ಒಳಗೊಂಡಿದೆ. ಇವರ ಪ್ರಬಂಧಗಳನ್ನು ಒಳಗೊಂಡಿರುವ ಅಂಶಗಳನ್ನು ಅನುಕ್ರಮವಾಗಿ ಇಲ್ಲಿ ವಿಶೇಷ ಪೋಷಣೆಗೊಳಪಡಿಸಿದ್ದು ಇದು ಮೊದಲ ಪ್ರಬಂಧವಾಗಿದೆ.

ಗೌರಜ್ಜಿ ಪ್ರಬಂಧದಲ್ಲಿ ಸಾಂಪ್ರದಾಯಿಕ ಹಿನ್ನಲೆಯಲ್ಲಿ ನಡೆಯುವ ಜೀವನದ ಪ್ರತಿಬಿಂಬವನ್ನು ಕಾಣಬಹುದು. ಹಿಂದಿನಕಾಲದಲ್ಲಿ ಹೆಣ್ಣಿನ ಪಾತ್ರವನ್ನು ಚಿತ್ರಿಸಿದ್ದಾರೆ. ಗೌರಜ್ಜಿಯ ಮೂಲಕ ಆಧುನಿಕ ತಲೆಮಾರಿಗೆ ಬಂದು ನಿದರ್ಶನವಾಗಿದೆ. ಅತ್ತೆಯ ಮನೆಯಲ್ಲಿ ಎದುರಾಗುವ ಸಮಸ್ಯೆಗಳನ್ನು ಮೌನದಿಂದ ಸಹಿಸಿಕೊಂಡರೆ ಜೀವನದಲ್ಲಿ ಮುಂದೆ ಸಾಗುವುದಕ್ಕೆ ಸುಲಭವಾಗುತ್ತದೆ. ಆ ಕಾಲದ ಸೊಸೆಯರು ದಿನಕ್ಕೊಂದು ಸಲವಾದರೂ ಅವರ ಅತ್ತೆಯವರಿಂದ ಹೆದರಿ ನಡುಗಿ ಕಣ್ಣೀರು ಬಿಡದಿದ್ದರೆ, ತಮ್ಮ ಯಜಮಾನಿತೆಗೆ ಬೆಲೆ ಇಲ್ಲವೆಂದು ಭಾವಿಸಿದ್ದರು.

ಗೌರಜ್ಜಿಯ ಮೂಲಕ ಈ ಪ್ರಬಂಧವಿಲ್ಲ. ಮನುಷ್ಯನ ಸಂಬಂಧ ಮತ್ತು ಮಾನವೀಯ ಮೌಲ್ಯಗಳ ಬೆಲೆಯನ್ನು ತಿಳಿಸುತ್ತದೆ. ಚಿಕ್ಕವರಾಗಿದ್ದಾಗೆ ಆ ತುಂಟತನ ಮತ್ತು ಅವರು ಮಾಡಿದ ಸಾಹಸಗಳನ್ನು ಅವರ ಮಕ್ಕಳ ಮುಂದೆ ಹೇಳಿದ್ದಾಗ ಆಗುವ ಅನುಭವ ಆ ಮಕ್ಕಳಲ್ಲಿ ಹಾಗು ಸಂತೋಷ ಕ್ಷಣವನ್ನು ಹೇಳಲು ಅಸಾಧ್ಯವಾಗುತ್ತದೆ. ಚಿಕ್ಕ ಮಕ್ಕಳನ್ನು ದೇವರು ಎಂದು ಭಾವಿಸುವ ಕಲ್ಪನೆಯ ಜೊತೆಯಲ್ಲಿ ಹಬ್ಬಗಳನ್ನು ಬಂದವುವೆಂದರೆ ಮಕ್ಕಳ ಪಾಡು ಬೇಡ ಬೋನಿನಲ್ಲಿಟ್ಟ ಹುಲಿಯಾಗೆ ಇಲ್ಲಿಂದ ಅಲ್ಲಿಗೆ ಪರವಾದವು ಮುದ್ದಿನ ಮಕ್ಕಳಿಗೆ ಅಜ್ಜಿ ಪ್ರೀತಿ ಆಸರೆಯಾಯಿತು.

ಗೌರಜ್ಜಿ ಒಂದು ಅತ್ಯುತ್ತಮ ವ್ಯಕ್ತಿಯಚಿತ್ರ ಇದು ಆ ಕಾಲದ ವಿದಿಮಯ ಬಾಳನ್ನು ತನ್ಮಯತೆಯಿಂದ ಚಿತ್ರಿಸುವುದರಿಂದ ಓದುಗರನ್ನು ಆ ಕ್ಷಣಕ್ಕೆ ಮೈ ಮರೆಸುತ್ತದೆ.

ಒಬ್ಬ ವ್ಯಕ್ತಿಯನ್ನು ಚಿತ್ರಿಸ ಹೊರಟದ ಅಲ್ಲಿರುವುದು ಒಬ್ಬ ವ್ಯಕ್ತಿಯ ಇತಿಮಿತಿಗಳನ್ನು ಮೀರಿ ಸಾಧಾರಣೀಕರಣವನ್ನು ಪಡೆದ ಚಿತ್ರ. ಯಾರದೇ ಮನೆಯಲ್ಲೂ ಇರಬಹುದಾದರೆ ಒಂದು ತಲೆಮಾರಿನ ಪ್ರತಿನಿಧಿಯನ್ನುವಂಥ ಒಬ್ಬ ವ್ಯಕ್ತಿಯ ಚಿತ್ರ. ತಮ್ಮ ಹೃದಯದ ಪರಿಪಕ್ವತೆಯಿಂದ ಯಾರದೇ ವ್ಯಕ್ತಿತ್ವನ್ನು ಸಹಾನುಭೂತಿಯಿಂದ ವಸ್ತು ನಿಷ್ಠವಾಗಿ ನೋಡದ ಶಕ್ತಿ ಲೆಖಕರಿಗಿದೆ.

"ಹೂವುಗಳು" ಮಾನವನ ಬದುಕಿನ ಸಾದೃಶ್ಯದ ಚಿತ್ರವಾಗಿದೆ. ಹೂವಿನ ಬದುಕಿನ ಕ್ರಮ ಮನುಷ್ಯನ ಜೀವನದ ಹೋರಾಟವಾಗಿದೆ. ನಾವು ಒಂದು ದಿನವೆನ್ನುವುದು ಹೂವುಗಳಿಗೆ ಒಂದು ಜೀವನದ ಕಾಲ ಆದರೂ ಅವು ತಮ್ಮ ಅಲ್ಪ ಆಯಸ್ಸನು ಎಷ್ಟ ಹರ್ಷದಿಂದ ಕಳೆಯುವುದು ಹೂವಿನ ಜೀವನವನ್ನು ನೋಡಲು ಆಶ್ಚರ್ಯವಾಗುತ್ತದೆ.

ಹೂವುಗಳ ಜೀವನಕ್ಕೂ ಮನುಷ್ಯನ ಜೀವನಕ್ಕೂ ಸದೃಶ್ಯವಿದೆಯೆಂದು ತಿಳಿಸುತ್ತದೆ. ನಮ್ಮ ದೇಶದ ಹೂವುಗಳು, ಪರದೇಶದ ಹೂವಿನ ಜೊತೆಯಲ್ಲಿ ಸ್ನೇಹಭಾವದಿಮದ ವರ್ತಿಸುತ್ತದೆ. ಮನುಷ್ಯರಲ್ಲಿ ಬರುವ ದುರಾಸೆ, ಅಸಹನೆ ಸ್ವಾರ್ಥ ಹೂವುಗಳಲ್ಲಿ ಕಾಣುವುದಿಲ್ಲ. ಇದರಿಂದ ಮನುಷ್ಯನ ಬದುಕು ಹೂವಿನ ಬದುಕಿನಂತೆ ಇರಬೇಕಾಗುತ್ತದೆ.

ಒಂದೊಂದು ಹೂವಿಗೂ ಒಂದೊಂದು ಗುಣವಿರುತ್ತದೆ. ಅದರ ಸೌಮ್ಯತೆಯಲ್ಲಿ ಅವುಗಳ ಗುಣವನ್ನು ತಿಳಿಸುತ್ತದೆ. ಎಲ್ಲಾ ಹೂವುಗಳು ಬಯಕೆ ದೇವರ ಮುಡಿಯನ್ನು ಸೇರುವುದು. ಮೂರ್ತಿರಾಯರು 'ಹೂವುಗಳು' ಎಂಬ ಪ್ರಬಂಧದಲ್ಲಿ ವರ್ಡ್ಸ್‌ವತ್ ಕವಿಯನ್ನು ಪ್ರಾಸುಗಿತವಾಗಿ ಉಲ್ಲೇಖಿಸಿದ್ದಾರೆ.

೧ "ಪ್ರತಿಯೊಂದು ಹೂವು ತನ್ನನ್ನು ನಲಿಸುವ ಗಾಳಿಯನ್ನು ಆನಂದದಿಂದ ಸೇವಿಸುವುದು ಎಂದು ವರ್ಡ್ಸ್‌ವರ್ತ ಕವಿಯು ಹೇಳಿದನು.

ಮೂರ್ತಿರಾಯರು ಯಾವುದೇ ಒಂದು ಹೂವಿಗೆ ತಮ್ಮ ಪ್ರಬಂಧವನ್ನು ಸೀಮಿತಗೊಳಿಸಿದ ಹೂವಿನ ಒಂದು ಚಿಕ್ಕ ವಸ್ತುವಿನಲ್ಲಿಯೂ ಸೌಂದರ್ಯ ತುಂಬಿದೆ ಎಂಬ ತತ್ವಪ್ರತಿಪಾದನೆ ಮಾಡಿದ್ದಂತೆಯಿದೆ.

ಪ್ರಬಂಧ ಕೊನೆಯಲ್ಲಿ ಲೇಖಕರಿಗೆ ದೇವರ ಬಗ್ಗೆಯ ಈ ನೀಲವನ್ನು ಹೊಂದಿದ್ದಾರೆ. ಈಗ ನಮಗೆ ದೇವರ ಪೂಜೆಯೆಂದರೆ ಮೊದಲನಂತೆ ಶ್ರದ್ದೆಯಿಲ್ಲ. ದೇವರು ಇರುವೆನೊ ಇಲ್ಲವೋ ಯಾರು ಬಲ್ಲರು ಎನ್ನುವ ಸಂಶಯವನ್ನು ವ್ಯಕ್ತಿಪಡಿಸುತ್ತಾರೆ.

---

ಅಡಿಟಿಪ್ಪಣಿ
೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ .೨೦, ಎ.ಎನ್.ಮೂರ್ತಿರಾವ್

"ಲಲಿತೆಯ ವಿದ್ಯಾಭ್ಯಾಸ" ಪ್ರಬಂಧ ಮದುವೆಯಾದ ಹೊಸತರಲ್ಲಿ ಪತ್ನಿ ಲಲಿತೆಗೆ ಇಂಗ್ಲೀಷ್ ಶಿಕ್ಷಣ ಕೊಡಿಸಲು ಮಾಡಿದ ಪ್ರಯಾಸ ಪೂರ್ವಕ ಪ್ರಯತ್ನ ಲಲಿತೆಯ ಪ್ರತಿಕ್ರಿಯೆ ಇಲ್ಲಿ ವಿನೋದವಾಗಿ ಮೂಡಿ ಬಂದಿದೆ. ಪ್ರಬಂಧದಲ್ಲಿ ಲೇಖಕರು, ತನ್ನ ಹೆಂಡತಿ ಲಲಿತೆಗೆ ಇಂಗ್ಲೀಷ್ ಹೇಳಿಕೊಡಲು ತೊಡಗುತ್ತದೆ. ಈ ರಹಸ್ಯ ಯಾರಿಗೂ ತಿಳಿಯಬಾರದು ಎಂದು ರಾತ್ರಿಯ ವೇಳೆ ತಮ್ಮ ಪಾಠಕ್ಕೆ ಸರಿಯಾದ ಸಮಯ ಎಂದು ತಿಳಿದು ಆ ಸಮಯವನ್ನು ಗೊತ್ತು ಮಾಡಿಕೊಳ್ಳುತ್ತಾರೆ. ಈ ಲಲಿತೆಯ ಅಭ್ಯಾಸಕ್ಕೆ ಹಲವು ತೊಂದರೆಗಳು ಎದುರಾಗಿ ವಿದ್ಯಾಭ್ಯಾಸ ನಿಂತುಹೋಗುತ್ತದೆ.

ಮನೆಯಲ್ಲಿ ಪತ್ನಿಯರು ಗುರುಶಿಷ್ಯರಾಗುವ ವೇಳೆಗೆ ಅವರಲ್ಲಿ ಸರಸತೆಯ ವಾತಾವರಣಕ್ಕೆ ಬದಲಾಗಿ ಒಂದು ಗಂಭೀರವಾದ ವಾತಾವರಣ ಸೃಷ್ಟಿಯಾಗುತ್ತದೆ. ಈ ಪ್ರಬಂಧದಲ್ಲಿ ಗುರುತಿಸಬಹುದಾದ ಪ್ರಮುಖ ಅಂಶವೆಂದರೆ ಲಲಿತೆಯ ಇಂಗ್ಲೀಷ್ ಬಾರದೆ ಇದ್ದಾಗ ಇರುವ ದಾಂಪತ್ಯ ಜೀವನಕ್ಕೂ ಇರುವ ಅಂತರವನ್ನು ಒಂದು ಸಾಂಸರಿಕ ಚಿತ್ರದ ಮೂಲಕ ತಿಳಿಸಿದ್ದಾರೆ. ಪತಿ ಪತ್ನಿಯರು ಪತಿ ಪತ್ನಿಯರಾಗಿಯೇ ಇದ್ದರೆ ಎಷ್ಟು ಚಂದ ಎಂಬ ಸಂದೇಶ ಇಲ್ಲಿದೆ.

ಈ ಪ್ರಬಂಧದಲ್ಲಿ ಆಧುನಿಕತೆಯಲ್ಲಿ ವಿದ್ಯಾಭ್ಯಾಸದ ಮಹತ್ವವನ್ನು ಪ್ರಬಂಧಕಾರರು ತಮ್ಮ ಲಲಿತೆಯ ವಿದ್ಯಾಭ್ಯಾಸ ಪ್ರಬಂಧದಲ್ಲಿ ತಿಳಿಸಿದ್ದಾರೆ. ಸ್ತ್ರೀ ವಿಮೋಚನಾ ಮತ್ತು ಮಹಿಳೋದ್ಧಾರ ವಿಷ್ವನಿರಸ ಅರ್ಥಹಿನ ಶುಷ್ಕ ಎಂಬ ವೈರಾಗ್ಯವೂ ಇದೆ ಮತ್ತು ವಿಡಂಬನೆ ಹಾಗೂ ಸ್ತ್ರೀಯರ ಇತಿಮಿತಿಗಳು ತಿಳಿಸಿದ್ದಾರೆ. ಹಾಗೆಯೇ ಲೇಖಕರು.

[೧] "ಇಂದಿನ ಸಮಾಜದಲ್ಲಿ ನಾಗರೀಕರೆಂದು ಹೇಳಿಕೊಳ್ಳುವ ನಾವು ಹೆಂಗಸರನ್ನು ಅಜ್ಞಾನ ರೂಪದಲ್ಲಿಯೇ ಇಟ್ಟಿರುವುದನ್ನು ನೋಡಿದರೆ ರಕ್ತ ಕುದಿಯುತ್ತದೆ. ನಾವು ಸಂಪ್ರದಾಯಕ್ಕೆ ಕಟ್ಟುಬಿದ್ದ ಗುಲಾಮರು ಹೇಡಿಗಳು ಎಂದು ನಾನು ಗರ್ಜಿಸುತ್ತಿರುವುದು. ಇತ್ತ ನನ್ನ ಪತ್ನಿಗೆ ಇಂಗ್ಲೀಷ್ ಓದಿ ಬರೆಯುವುದಕ್ಕೆ ಬಾರದು ಹಾಗೆಯೇ ಯೋಚಿಸಿ ನೋಡಿ ಇನ್ನೂ ಕಾಲ ಮೀರಿಲ್ಲ. ಈ ಕುಂದನ್ನು ಹೋಗಲಾಡಿದೆ ಮತ್ತೆ ನಾಲ್ಕು ಜನರಲ್ಲಿ ತಲೆಯೆತ್ತಿಕೊಂಡು ನಡೆಯಬೇಕು ಎಂದುಕೊಂಡು ಕೂಡಲೇ ಲಲಿತೆಗೆ ಒಬ್ಬ ಉಪಾಧ್ಯಾಯಿನಿನುಗೊತ್ತು ಮಾಡಬೇಕೆಂದು ನಿಶ್ಚಯಿಸಿದ್ದೇನೆ.

---

ಅಡಿಟಿಪ್ಪಣಿ:
ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ , ಎ.ಎನ್.ಮೂರ್ತಿರಾವ್ ೪೯

ಪ್ರಬಂಧಕಾರ ಮಾತಿನಲ್ಲಿ ಇದ್ದದ್ದನ್ನು ವಿಶ್ಲೇಷಿಸಬೇಕೆಂದರೆ ಇಂದಿನ ಸಮಾಜದಲ್ಲಿ ವಿದ್ಯಾವಂತರೆನಿಸಿಕೊಂಡು ಜನರ ಸಂಘವಿಲ್ಲದಿದ್ದರೆ ನಿತ್ಯ ಜೀವನದಿಂದ ದೂರ ಇರುವ ಶಿಕ್ಷಣವನ್ನು ಕುರಿತು ಟೀಕೆ ಇದೆ.

ಈ ಪ್ರಬಂಧ ಕೊನೆಯಲ್ಲಿ ಅತ್ಯಂತ ನಾಟಕೀಯವಾಗಿದೆ. ಮುಕ್ತಾಯವಾದ ಘಟಕದಲ್ಲಿ ಇದರಲ್ಲಿ ವ್ಯಕ್ತವಾಗುವ ಧ್ವನಿ ಸಾಂಸಾರಿಕ ಸಾಮರಸ್ಯವನ್ನು ಸಾರುತ್ತದೆ.

ಈಗ ಲಲಿತೆಯಾ ನಾನು ಒಟ್ಟಿಗೇ ರೋಮಿಯೋ ಜೂಲಿಯಟ್ ನಾಟಕವನ್ನು ಷೆಲ್ಲಿಯ ಗೀತೆಗಳನ್ನು ಓದುತ್ತೇವೆ. ಆದರೆ ಅದು ನನ್ನ ಶಿಕ್ಷಣದ ಮಹಿಮೆಯಲ್ಲಿ.

ಪ್ರಣಯಯಾತ್ರೆ ಈ ಪ್ರಬಂಧ ಒಂದು ಕಥನ ಪ್ರಬಂಧ. ನೂತರನ ದಂಪತಿಗಳು ಬಂದು ಹಳ್ಳಿಗೆ ಹೋಗಿ ನೆಲಸಿ ಅಲ್ಲಿ ಅವರು ಪಟ್ಟ ಬಾವಣೆಯನ್ನು ನವಿರಾದ ಹಾಸ್ಯದ ಶೈಲಿಯಿಂದ ವರ್ಣಿಸುತ್ತಾರೆ. ಅಲ್ಲಿ ನಮಗೆ ಒಂದು ಸುಂದರ ಪ್ರಪಂಚ ನಮ್ಮ ಮುಂದೆ ತೆರೆದುಕೊಳ್ಳುತ್ತದೆ.

ಲೇಖಕರು ತನ್ನ ಹೆಂಡತಿ ಲಲಿತೆಯ ಜೊತೆ ಹನೂರಿಗೆ ಪ್ರಣಯಯಾತ್ರೆ ಹೊರಡುತ್ತಾರೆ. ಸುಮಾರು ಒಂದು ತಿಂಗಳಕಾಲ ಅಲ್ಲಿಯೇ ಇರುವುದು ಎಂದು ತೀರ್ಮಾನಿಸುತ್ತಾರೆ. ಆದರೆ ಪರಿಚಿತವಿಲ್ಲದ ಊರಿಗೆ ಅಪರಿಚಿತರ ಭೇಟಿಯಿಂದ ಅಲ್ಲಿಯೆ ಅನಾನುಕೂಲದಿಂದ ಅವರ ಪ್ರಣಯಯಾತ್ರೆ ಕೇವಲ ಇಪತ್ತೇ ದಿನಗಳಲ್ಲಿ ಮುಗಿಯುತ್ತದೆ.

ಪ್ರಬಂಧ ಕೊನೆಯಲ್ಲಿ ಬರುವ ಸನ್ನಿವೇಶ ಗಾಂಭೀರ್ಯವಾದ ಸೊಸೆಯ ಅನಾರೋಗ್ಯ ತಿಳಿದ ಅತ್ತೆ ಹೊರಟು ಹನೂರಿಗೆ ಬಂದು ಸೊಸೆಯ ಅನಾರೋಗ್ಯ ತಿಳಿದು ಮಗನನ್ನು ಲಘುವಾಗಿ ಅಪೇಕ್ಷಿಸುತ್ತಾಳೆ. ಅಲ್ಲಲ್ಲಿ ಅತ್ತೆ, ಸೊಸೆಯರ ನಡುವಣ ಅನ್ಯೂನ್ಯತೆ ಅನುಕರಣೆಯೂ ಆದರ್ಶವಾಗಿದೆ. ಲೇಖಕರ ಸರಳಜೀವನವನ್ನು ತಿಳಿಯಬಹುದು ಈ ಪ್ರಬಂಧದಲ್ಲಿ ಪ್ರಬಂಧಕಾರ ವೈಯಕ್ತಿ ಜೀವನ ಸಂಸಾರದ ದಾಂಪತ್ಯಗಳ ಪ್ರಬಂಧವಸ್ತು.

"ಗಾಡಿಯ ಪ್ರಯಾಣ" ಇಂದಿನ ಯಾಂತ್ರಿಕ ಜೀವನದಲ್ಲಿ ಮನುಷ್ಯನು ತನ್ನ ಸುಖ ಸಂತೋಷವನ್ನು ಮರೆತು, ಬದುಕನ್ನು ಸಾಗಿಸುತ್ತಿದ್ದಾನೆ. ಪ್ರಕೃತಿಯ ಸೌಂದರ್ಯದ ಹರಿವಿಲ್ಲವೆಂದು

ಹೇಳಬಹುದು. ಲೇಖಕರು ಪ್ರಯಾಣಿಕರ ಮನಸ್ಸಿನ ಒಳತೋಟಗಳ ಚಿತ್ರವನ್ನು ಮತ್ತು ಪ್ರಕೃತಿಯ ಮುಕ್ತವಾತಾವರಣದ ಕೋಮಲವಾದ ಹಾಗೂ ಪ್ರಸನ್ನವಾದ ನಿಸರ್ಗದ ಚಿತ್ರವಣವನ್ನು ಒಳಗೊಂಡಿದೆ.

[೧] "ಮೇಲೆ ತಿಳಿಯದ ನಕ್ಷತ್ರ ಮಂಡಿತವಾದ ಆಕಾಶ ಮುಂದೆ ಬೆಳಂದಿಗಳಿನಲ್ಲಿ ಇಲ್ಲಿ ಶುಭ್ರವಾಗಿಯು ಅಲ್ಲಿ ಸ್ಪಷ್ಟವಾಗಿಯೂ ನೆರಳಿನ ನಡುವೆ ನುಸುಳಿಕೊಂಡು ಹೋಗುವರಷ್ಟೇ ಮೃದುವಾಗಿ ಬೀಸುವ ತಂಗಾಳಿ ಎತ್ತುಗಳ ಕೊರಳಿನಲ್ಲಿರುವ ಗೆಜ್ಜೆಯ ಶಬ್ದ ಈ ಆವರಣದಲ್ಲಿ ಗಾಡಿಯ ಪ್ರಯಾಣವೇ ಹಿತ.

ಒಟ್ಟಿನಲ್ಲಿ ರೈಲು ರಸ್ತೆಯಲ್ಲಿ ಒಂದು ಮಧುರವಾದ ಮಾಧುರ್ಯ ಕಾಣುವುದಿಲ್ಲ. ಗಾಡಿಯ ಪ್ರಯಾಣವು ನಮ್ಮನ್ನು ಆಧಾರದಿಂದ ಬರಮಾಡಿಕೊಳ್ಳುತ್ತದೆ. ಮೂರ್ತಿರಾಯರು ಕೂಡ ತಮ್ಮ ಜೀವನದ ಬದುಕಿನ ಘಟಣೆಯಲ್ಲಿ ನಡೆದ ವಿಷಯವನ್ನು ಅಂದರೆ ಭೂತಕಾಲಕ್ಕೆ ಸರಿದು ಬರೆದ ಪ್ರಬಂಧವಾಗಿದೆ.

"ಹೆಂಡತಿಯ ಹೆಸರು" ಪ್ರಬಂಧದಲ್ಲಿ ಸಾಂಪ್ರದಾಯಿಕ ಸಂಸ್ಕೃತಿಯ ಹೀನತೆಯುಳ್ಳ ಕುಟುಂಬದಲ್ಲಿ ಹೆಂಡತಿಯರಿಗೆ ಯಾವ ಸ್ಥಾನವನ್ನು ನೀಡುತ್ತಿದ್ದರು. ಯಾವ ಸ್ಥಾನವನ್ನು ನೀಡುತ್ತಿದ್ದರು. ಹಾಗು ಅವರ ಆಚಾರ ವಿಚಾರಗಳ ಎಲ್ಲವೂ ಸಾಂಪ್ರದಾಯಕ್ಕೆ ಒಳಪಟ್ಟಿದವು. ಆ ಸಮಾಜದಲ್ಲಿ ಅವಿಭಕ್ತಕುಟುಂಬಗಳ ಹೆಚ್ಚು ಕುಂದು ಬೀರುತ್ತದೆ. ಇಂತಹ ಕುಟುಂಬದಲ್ಲಿ ಹಿರಿಯರಿಗೆ ಹೆಚ್ಚಿಗೆ ಗೌರವವನ್ನು ನೀಡಬೇಕಾಗಿತ್ತು. ಆದ್ದರಿಂದ ಕಿರಿಯರು ಹಿರಿಯರ ಮುಂದೆ ತಮ್ಮ ಮಡದಿಯ ಹೆಸರನ್ನು ಕರೆಯದೆ ಸುತ್ತಿ ಬಳಸಿ ಅವರನ್ನು ಮಾತನಾಡಿಸಬೇಕಾಗಿತ್ತು.

ಆದರೆ ಲೇಖಕರು ತಮ್ಮ ಪ್ರಬಂಧದಲ್ಲಿ [೨] "ಹಿಂದಿನ ಕಾಲದವರೆಗೆ ತಮ್ಮ ಸಹದರ್ಮಿನಿಯನ್ನು ಹೆಸರಿಟ್ಟು ಕರೆಯುವುದು ಅವಮಾನಕರ ನಾಚಿಕೆಕೇಡು ಇಲ್ಲವೆ ಶೀಲಕ್ಕೆ ತಕ್ಕುದಲ್ಲ ಎಂದು ಭಾವನೆ ಹೇಗೋ ಬಂದು ಹೋಗಿರಬೇಕು ಇಲ್ಲದಿದ್ದರೆ ಆ ನಿಯಮವನ್ನು ಅಷ್ಟು ನಿಷ್ಠೂರವಾಗಿ ಪಾಲಿಸಿಕೊಂಡು ಬರುತ್ತಿರಲ್ಲಿಲ್ಲ__

---

ಅಡಿಟಿಪ್ಪಣಿ
೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೨೭, ಎ.ಎನ್.ಮೂರ್ತಿರಾವ್ ೨೭
೨. ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೨, ಎ.ಎನ್.ಮೂರ್ತಿರಾವ್

ಪ್ರಬಂಧಕಾರರು ತಮ್ಮ ಹೆಂಡತಿಯ ಹೆಸರನ್ನು ಕನ್ನಡ ನಾಡಿನ ಮಾತೃಭಾಷೆಗೆ ಹೋಲಿಸಿದ್ದಾರೆ. ಮೂರ್ತಿರಾಯರು ಪ್ರಬಂಧದಲ್ಲಿ ಕೇಳಿ ಪ್ರಬಂಧ ಪತ್ನಿ ಲಲಿತೆ ಪ್ರಬಂಧಗಳಲ್ಲಿ ಅಂತರ್ಗತಳಾಗಿ ಪ್ರವಾಹಿಸುತ್ತ ಪ್ರಬಂಧಕ್ಕೆ ಜೀವ ನೀಡುತ್ತದೆ 'ಹೆಂಡತಿಯ ಹೆಸರು' ಹೆಂಡತಿಗೆ ಯಾವ ಹೆಸರನ್ನಿಟ್ಟರೆ ಚಂದ, ಸೂಕ್ತ ಎಂದಲ್ಲ ವಿಚಾರ ಮಾಡುತ್ತ ಸಾಗುವ ಈ ಪ್ರಬಂಧ ಕೊನೆಗೂ ಹೆಂಡತಿಯ ಹೆಸರಿನ ಬಗ್ಗೆ ನಿಕಾರವಾದ ತೀರ್ಮಾನಕ್ಕೆ ಬರುವುದಿಲ್ಲ. ತಾಯ್ನಾಡಿನಲ್ಲಿ ಹೆಂಡತಿಗೆ ಸೂಕ್ತವಾದ ಹೆಸರೇವಿಲ್ಲವೆಂಬ ತೀರ್ಮಾನ ಇಲ್ಲಿದೆ. ಸ್ಥಾನಭವ ನಿಶ್ಚಿತವಾದ ಈ ಪ್ರಬಂಧವಸ್ತು ಹೆಂಡತಿಗೆ ಹೆಸರು ಎಂದಾದರು ನಮ್ಮ ಕುತೂಹಲವನ್ನು ಉಳಿಸುತ್ತಾ, ಬೆಳೆಸುತ್ತಾ ಹೋಗಿ ಕೊನೆಯಲ್ಲಿ ಯಾವುದೇ ನಿರ್ಣಯಕ್ಕೂ ಬರುವುದಿಲ್ಲ

'ದೀವಾನಖಾನೆಯ ಅಂದಚಂದ' ಈ ಪ್ರಬಂಧವು ಬಂದು ಮನೆಯ ಸಾಂಸಾರಿಕ ಚಿತ್ರಣವನ್ನು ತೆರೆದಿಡುತ್ತದೆ. ಮನುಷ್ಯನ ಜೀವನವು ಯಾವುದೇ ಒಂದು ವಿಷಯದಲ್ಲಿ ತನ್ನ ಪರಿಪೂರ್ಣತೆಯನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಲಲಿತ ಒಂದು ದಿನ ಪರಿಚಿತರಾದವರ ಮನೆಗೆ ಅರಿಶಿಣ ಕುಂಕುಮಕ್ಕೆ ಹೋದಳು. ಅವರ ದೀವಾನಖಾನೆಯ ಅಂದ ಚಂದಕ್ಕೆ ಮಾರು ಹೋಗುತ್ತಾಳೆ. ಜೊತೆಗೆ 'ಸಿಂಧು' ಎಂಬ ಪತ್ರಿಕೆಯಲ್ಲಿ ಗೃಹಶೃಂಗಾರ ವಿಭಾಗದ ಲೇಖನದ ಪ್ರಭಾವಕ್ಕೂ ಒಳಗಾಗುತ್ತಾಳೆ. ಪರಿಣಾಮವಾಗಿ ಮೂರ್ತಿರಾಯರು ದಿವಾನಖಾನೆ ಹೊಸರೂಪ ಪಡೆಯುತ್ತದೆ. ಇದಕ್ಕಾಗಿ ಅವರು ನೂರಾರು ರೂಪಾಯಿಗಳು ವೆಚ್ಚವಾಗುತ್ತದೆ.

ಅಂದು ಸುಂದರ ಮನೆಯೂ ನಿರ್ಮಾಣ ಮಾಡಲು ಎಷ್ಟು ಪರಿಶ್ರಮವನ್ನು ವಹಿಸಬೇಕು. ಆ ಮನೆಯ ನಿರ್ಮಾಣವಾದ ಮೇಲ ಅಲ್ಲಿಯೇ ನಾವು ವಾಸಮಾಡುವಾಗ ಪಡುವ ಆನಂದಕ್ಕೆ ಮಿತಿಯೇ ಇಲ್ಲ ಎಂದು ತಿಳಿಯಬಹುದು. ಮನೆಗೆ ಪೀಠ ಉಪಕರಣವಂತಹ ವಸ್ತುಗಳು ತಂದಾಗ ಅದು ನಮ್ಮ ಸ್ವತಂತ್ರಕ್ಕೆ ದಕ್ಕೆಯನ್ನುಂಟು ಮಾಡುತ್ತವೆ. ಆದರೆ ಅವುಗಳು ಎಲ್ಲಿ ನಾಶವಾಗುತ್ತದೆ ಎಂದು ಅದಕ್ಕೆ ವಹಿಸುವ ಎಚ್ಚರಿಕೆ ಬೇರೆಯವರ ಮನಸ್ಸಿಗೆ ದಕ್ಕೆಯನ್ನುಂಟು ಮಾಡುತ್ತದೆ.

[೧]'ಒಂದು ವಿಧವಾದ ಪರಿಪೂರ್ಣತೆಯನ್ನು ಪಡೆದ ಆ ಸೌಂದರ್ಯ ನನ್ನ ಕಣ್ಣಿಗೆ ಸಿಂಗರಿಸಿದ ಶವದಂತೆ ಕಾಣುತ್ತದೆ. ಪ್ರಕೃತಿಯ ಜೀವನದಲ್ಲಾಗಲಿ ಮಾನವನ ಜೀವನದಲ್ಲಾಗಲಿ ಈ ಬಗ್ಗೆಯ ಪರಿಪೂರ್ಣತೆಯೂ ನಿಶ್ಚಲತೆಯೂ ಕಾಣುವುದಿಲ್ಲ.

---

ಅಡಿಟಿಪ್ಪಣಿ
೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೯೭ ಎ.ಎನ್.ಮೂರ್ತಿರಾವ್.

ಆದರೆ ಲೇಖಕರ ಸ್ವಾತಂತ್ರಯ ನೆಮ್ಮದಿಗಳು ಆಧುನಿಕತೆಯ ಮೆರಗಿನಲ್ಲಿ ನಿರ್ಮಾಣವಾಗುತ್ತದೆ. ಇದು ಎಲ್ಲಕ್ಕಿಂತಲೂ ಮಗ ರಾಮು ತುಂಟ ಆಟಗಳಿಗೆ ಧಕ್ಕೆಯುಂಟು ಆದಾಗ ಮೂರ್ತಿರಾಯರು.

[೧] 'ಕುಚಿಯೋ–ಮಗುವೋ–ಯಾವುದು ಹೆಚ್ಚು? ಎಂದು ಲಲಿತೆಗೆ ಪ್ರಶ್ನಿಸುತ್ತಾರೆ. ಮೂರ್ತಿರಾಯರ ಹಾಸ್ಯದ ಮತ್ತು ಕೋಮ ನಿರ್ಮಲ ಮನಸ್ಸನ್ನು ಕಾಣಬಹುದು.

ದಿವಾನಖಾನೆಯ ಅಂದ ಚಂದ ಪ್ರಬಂಧ ಮೂರ್ತಿರಾಯರ ಜೀವನದ ದರ್ಶನವನ್ನೆ ಎತ್ತಿ ಹಿಡಿಯುವ ಒಂದು ಪ್ರಬಂಧ. ಒಂದು ರೀತಿಯಲ್ಲಿ ಇದು ಬಂದು ಕೌಟುಂಬಿಕ ಪ್ರಬಂಧ. ಓದುಗರ ಬಗೆಗಣ್ಣನ್ನು ತೆರಸಿ ಬಿರಿದು ಅಂತರಂಗ ಜಾಗೃತಿಯನ್ನುಂಟು ಮಾಡುವ ತಾತ್ವಿಕ ಪ್ರಬಂಧ. ಈ ಪ್ರಬಂಧದಲ್ಲಿ ಒಂದು ಚಿಂತನಶೀಲ ವಿಚಾರವಿದೆ. ದಿವಾನಖಾನೆಯನ್ನು ಬಿರಿದು ಪ್ರತಿಮೆಯನ್ನಾಗಿಸಿರಿಕೊಂಡು ಅದರ ಸುತ್ತ ಹೆಣೆದ ವಿಚಾರ ಬಂದ ಇಂದಿನ ನಾಗರೀಕ ಜೀವನದ ಮರೀಚಿಕೆಯನ್ನು ಯಥಾವತ್ತಾಗಿ ಚಿತ್ರಿಸಿದೆ.

'ಹರಕೆಗಳು' ಎಂಬ ಪ್ರಬಂಧ 'ವಿವಿಧತೆಯಲ್ಲಿ ಏಕತೆ" ಎಂಬ ನಿಲವನ್ನು ಕಾಣಬಹುದು. ಸಮಾಜದಲ್ಲಿ ದೇವರ ಹೆಸರಿನಲ್ಲಿ ನಡೆಯುವ ಶೋಷಣೆ ಮತ್ತು ಜನರ ಮನಸ್ಥಿತಿಯನ್ನು ವಿವರಿಸಿದ್ದಾರೆ. ಹಿಂದು ದೇವರು, ಮುಸ್ಲಿಂದೇವರು, ಕ್ರೈಸ್ತದೇವರು ಯಾವ ದೇವರನ್ನು ಬಿಡಲು ಮನಸ್ಸು ಆಗುವುದಿಲ್ಲ ಎಂಬ ಮಾತು ಲೇಖಕರ ಬರಹದಿಂದ ತಿಳಿಯಬಹುದು.

[೨] "ನಾವು ಹರಟೆ ಕಟ್ಟುವುದು ನಮ್ಮ ಜಾತಿಯ ದೇವರಿಗೆ ಮಾತ್ರದಲ್ಲಿ ಮಹಮ್ಮದೀಯರು ಊರು ಮುಂದಿನ ಹನುಮಂತರಾಯನಿಗೆ ದದ್ಯೋವನದ ಸೇವೆ ಮಾಡಿಸಿದ್ದುಂಟು. ಬ್ರಾಹ್ಮಣರು ಪಿಲೋಮೆನಾ ದೇವಾಲಯಕ್ಕೆ ಮುಡುಪು ಕಟ್ಟಿಡುತ್ತಾರೆ. ಹದಿನಾರಾಗೆ ಅಭ ಹಿಂದುಗಳು ಹರಕೆ ತೀರಿಸಲು ಮೊಹರಂ ಹಬ್ಬದಲ್ಲಿ ವೇಷ ಹಾಕಿ ಕುಣಿಯುತ್ತಾರೆ.

---

ಅಡಿಟಿಪ್ಪಣಿ

೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೯೩, ಎ.ಎನ್.ಮೂರ್ತಿರಾವ್

೨ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ೧೧೦೨,ಎ.ಎನ್.ಮೂರ್ತಿರಾವ್

ನಿಜವಾಗಿ ಮನುಷ್ಯನ ಸ್ವಾರ್ಥದ ಪರಮಾವಧಿಯೆಂದು ತಿಳಿಯಬಹುದು. ಸಹನೆಗೆ ಮೀರಿದ ಕುಷ್ಟಕ್ಕೆ ಸಿಕ್ಕಿದಾಗ ನಮ್ಮ ಆಚಾರ ವಿಚಾರಗಳ ಹೊರದೂಡಿ ನಂಬಿಕೆಗೆ ಶರಣಾಗುತ್ತದೆ.

ಪ್ರಬಂಧಕಾರರು ಹರಕೆಯ ಮೂಲವನ್ನು ಹುಡುಕುತ್ತಾರೆ. "ದೇವರನ್ನು ಒಲಿಸಿಕೊಂಡು ನಮ್ಮ ಇಷ್ಟಾಧರ್ಮಗಳನ್ನು ಸಾಧಿಸಬೇಕಾದರೆ ನಾವು ಅವನ ಮಟ್ಟಕ್ಕೆ ಏರಬೇಕು. ಇಲ್ಲವೆ ಅವನನ್ನು ನಮ್ಮ ಮಟ್ಟಕ್ಕೆ ಇಳಿಸಿಕೊಳ್ಳಬೇಕು......."

"ವ್ಯಾಘ್ರಗೀತೆ" ಯನ್ನು ಮೂರ್ತಿರಾಯರೇ ಸಣ್ಣಕಥೆಗಳ ಗುಂಪಿಗೆ ಸೇರಿದ್ದಾರೆ. ಇಂತಹ ವಿಶಿಷ್ಟ ಪ್ರತಿಭೆ ಪ್ರಬಂಧಕಾರರಿಗೆ ಇದೆ. ಶಾನುಭೋಗರೊಬ್ಬರು ಚಿಕ್ಕನಾಯಕನ ಹಳ್ಳಿಗೆ ಹೋಗಿ ಖಜಾನೆಗೆ ಹಣ ಕಟ್ಟಿ ಹಿಂದಿರುಗುವಾಗ ಹುಲಿಯೊಂದ ಕೈಯಿಂದ ಪಾರಾಗಿ ಬಂದ ಕಥೆಯಿದು ಹಾಗೂ ಪ್ರಬಂಧವನ್ನು ಬರೆದಿದ್ದಾರೆ.

ಮೂರ್ತಿರಾಯರ ಈ ಪ್ರಬಂಧದಲ್ಲಿ ಉಪನಿಷತ್ತಿನ ಗೀತೆಯ ನೋವಿನಕಥೆಯ ಹಾಗೂ ಬೈಬಲ್ ನ ವಿಚಾರವನ್ನು ಸಂದರ್ಭನುಸಾರವಾಗಿ ಉಲ್ಲೇಖಿಸಿದ್ದಾರೆ. ಶಾನುಭೋಗವು ಹುಲಿಯಿಂದ ತಪ್ಪಿಸಕೊಳ್ಳಲು ಅವರು ಅವರ ಕೈಯಲ್ಲಿ ಇದ್ದ ಖರ್ದಿ ಪುಸ್ತಕವನ್ನು ಉಪಯೋಗಿಸಿಕೊಂಡಿದ್ದರು.

[೧]"ಆ ಶಾನುಭೋಗರಂತೂ ಈಗ ಇಲ್ಲ. ಆದರೆ ಖರ್ದಿ ಪುಸ್ತಕ ಇಂದಿಗೂ ಭದ್ರವಾಗಿದೆ. ದೇವರ ಮಂದಾಸನದ ಮೇಲೆ ಮಂಡಿಸಿ ಶಾನುಭೋಗರ ಸಂತತಿಯವರಿಂದ ಈಗಲೂ ಪೂಜೆಯನ್ನು ಕೈಗೊಳ್ಳುತ್ತಿದೆ. ಅವರೆಲ್ಲರ ಕೃತಜ್ಞತೆಯೂ ಅದಕ್ಕೆ ಸರಿದಿದೆ. ಆದರೆ ನಿಜವಾಗಿ ನೋಡಿದರೆ ಶಾನುಭೋಗರು ಉಳಿದದ್ದು ಖರ್ದಿ ಪುಸ್ತಕದಲ್ಲಿ ಹುಲಿಯ ಧರ್ಮಶ್ರದ್ದೆಯಿಂದ.

ಆ ಪ್ರಬಂಧದಲ್ಲಿ ಮನುಷ್ಯರಿಗೆ ಧರ್ಮದ ಆಚಾರಣೆ ಇಲ್ಲದಿದ್ದರೂ ಒಂದು ಮುಖಾಪ್ರಾಣಿಯಾದ ಹುಲಿಯಲ್ಲಿ ತಿಳಿಯಬಹುದು.

---

ಅಡಿಟಿಪ್ಪಣಿ
೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ .೧೨೩ ಎ.ಎನ್.ಮೂರ್ತಿರಾವ್

“ಕಾರ್ ರಿಪೇರಿ ನೀನೆ ಮಾಡಿ ನೋಡು” ಎಂಬ ಪ್ರಬಂಧದಲ್ಲಿ ಆಧುನಿಕತೆಯ ಸಂಭ್ರಮದಲ್ಲಿ ಮನುಷ್ಯನು ಸ್ವಾರ್ತಕತೆಗೆ ಹೋರಟಿದ್ದಾನೆ. ಶ್ರೀಮಂತಿಕೆಯ ಸ್ವರೂಪವಾದ ಕಾರು ಅದರಿಂದ ಪಡುವ ಯಾತೆಯನ್ನು ಪ್ರಬಂಧಕಾರರು ತಿಳಿಸಿದ್ದಾರೆ. ಮೂರ್ತಿರಾಯರ ಮಿತ್ರಗೋಪಾಲ ಈ ತಂದ ಕಾರು ರಸ್ತೆಯ ಬೀದಿಯಲ್ಲಿ ಆಗಾಗ್ಗೆ ಕೆಟ್ಟು ಹೋಗುತ್ತಿತ್ತು ಇದಕ್ಕೆ ಮೂರ್ತಿರಾಯರು.

[೧] “ಯಂತ್ರವೆಂದರೆ ಈ ಘಳಿಗೆ ಸರಿಯಾಗಿದ್ದು ಮುಂದಿನ ಘಳಿಗೆ ಕೆಟ್ಟು, ಹೋಗುವ ವಸ್ತು ವಿಷಯ. ಅದು ಜನರ ಬೇಸರವನ್ನೂ ದೇಹಶ್ರಮವನ್ನು ಕಳೆಯಲು ಹುಟ್ಟಿತೆಂದು ಭಾವಿಸುವುದು ಶುದ್ಧಹುಚ್ಚತನ.

ಬೆಳಕಿನ ಆಕರ್ಷಣೆಗೆ ಪತಂಗವೂ ಒಂದು ಪ್ರಾಣವನ್ನು ನೀಡಬೇಕಾಗುತ್ತದೆ. ಆದರೆ ಇಲ್ಲಿ ನಮ್ಮಗೆ ಎಲ್ಲಾ ತಿಳಿದಿದ್ದರೂ ಒಮ್ಮೊಮ್ಮೆ ಪತಂಗದ ಸ್ಥಿತಿಯನ್ನು ಅನುಭವಿಸಬೇಕಾಗುತ್ತದೆ. [೨]” ಕಾರ್ ಕೆಟ್ಟು ಮೆಕ್ಯಾನಿಕ್ ತೋರಿಸಿದಾಗ ಅವನ ಪ್ರತಿಕ್ರಿಯೆ ಹೀಗೆ ಈ ತಂತಿ ನೋಡಿದಿರಾ? ಷಾರ್ಟಾಗಿ ಹೋಗಿದೆ ಡೈನೆಮೋ ಸುಟ್ಟುಹೋಗಿದೆ. ಹೊಸದು ಹಾಕಿಸಬೇಕು ಇದನ್ನು ನೀವೆ ರಿಪೇರಿ ಮಾಡಿದಿರಾ_ ಒಂದೊಂದು ವೇಲೆ ಎಂಜನಿಯರಿಂಗಿಗೆ ಬದಲಾಗಿದೆ ಆ ಎಂಜನಿಯರಿಂಗ್ ಆಗಿ ಹೋಗುತ್ತೆ ಏನು ಮಾಡುವುದು.



ಇಲ್ಲಿಯೂ ಸಹ ಮೂರ್ತಿರಾಯನ ಹಾಸ್ಯಮನೋಭಾವವನ್ನು ನೋಡಬಹುದು. ಅವರ ಕಾರಿನಿಂದ ಅನುಭವಿಸಿದ ತೊಂದರೆಗಳನ್ನು ಪ್ರಬಂಧಕಾರರು ತಮ್ಮ ಬರಹದಲ್ಲಿ ತಮಾಷೆಯಿಂದ ವರ್ಣಿಸುತ್ತಾರೆ. ಕೆಲವು ಸಂದರ್ಭದಲ್ಲಿ ಮನುಷ್ಯನ ಆನೆಗಳು ಬೆನ್ನುಹತ್ತಿದ ಬೇತಾಳದಂತೆ ಇದನ್ನು ನಾವು ಸ್ವೀಕರಿಸಬೇಕಾಗುತ್ತದೆ.

---

ಅಡಿಟಿಪ್ಪಣಿ

೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೧೨೫, ಎ.ಎನ್.ಮೂರ್ತಿರಾವ್

೨ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ .೧೨೮ ಎ.ಎನ್.ಮೂರ್ತಿರಾವ್

‘ಕುರುಡ’ ಪ್ರಬಂಧ ವಸ್ತು ಹಳೆಯದು ಆದರೆ ಪಾತ್ರ ಸೃಷ್ಟಿ ಹಾಗೂ ಪ್ರತಿಪಾದಿಸಲ್ಪಟ್ಟ ಮೌಲ್ಯಗಳಿಂದ ಇದಕ್ಕೆ ಒಂದು ಹೊಸತನದ ಮೆರುಗು ಬಂದಿದೆ. ಮೂರ್ತಿರಾಯರ ಪ್ರಬಂಧಗಳಲ್ಲಿ ಅತ್ಯಂತ ಮಹತ್ವವಾದ ಪ್ರಸಂಗಗಳು ಎದುರು ಆಗುತ್ತದೆ.

ನಲವತ್ತು ವರ್ಷಗಳಿಂದ ತನ್ನ ಮಗುವನ್ನು ಕೈ ಹಿಡಿದು ತಿರುಗಿಸುತ್ತಿರುವಳು. ಅವಳ ಪ್ರೇಮವೆಷ್ಟು, ಸಹನೆಯಷ್ಟು ಸಾಧಾರಣವಾಗಿ ಇಂಥ ವಿಷಯಗಳು ಕಿವಿಗೆ ಬಿದ್ದರೆ ಯಾರಿಗೆ ಆದರು ‘ಅಯ್ಯೋ ಪಾಪ’ ಎಂದು ಮರುಕುತ್ತೇವೆ.

ಒಂದು ದಿನ ಖಾಯಿಲೇ ಮಲಗಿದರೇ ನಮಗೆ ಬೇಸರ ಆದರೆ ಈಕೆ ತನ್ನ ಮುಖವನ್ನು ಮಗನನ್ನು ಕೈಹಿಡಿದು ತಿರುಗಿಸುತ್ತಿರುವಳು. ಕಾರು ಆ ಮಗನಿಗೆ ಕಣ್ಣುಗಳಲ್ಲಿ ದೃಷ್ಟಿಯನ್ನು ಕಳೆದುಕೊಂಡು ಕುರುಡನ ಸ್ಥಿತಿಯಲ್ಲಿ ನೋಡಿದ್ದಾರೆ. ಹೃದಯದಲ್ಲಿ ಆವರಿಸಿರುವ ಮಂಜನ ಮುಸುಕನ್ನು ತೆರೆಯಿಸುತ್ತದೆ.

ಮೂರ್ತಿರಾಯರ ಈ ಪ್ರಬಂಧದಲ್ಲಿ ಸಮಾಜದಲ್ಲಿನ ಮನುಷ್ಯನ ಸಂಬಂಧವನ್ನು ತಿಳಿಸುತ್ತದೆ. ತಾಯಿ ಮಗನ ಪ್ರೀತಿ ವಾತ್ಯಲ್ಯದ ಮೌಲ್ಯವನ್ನು ಕಾಣಬಹುದು. [೧] “ನನ್ನದು ದೂರದ ಮರಕ, ಲಲಿತೆಯ ಮರುಕುವ ಆ ತಡೆಗಳನ್ನು ದಾಟಿ ಆ ವೃಂದವನ್ನು ಸೇರಿತು. ಹೃದಯವು ಹೃದಯದೊಂದಿಗೆ ಬೆರೆಯಿತು. ನಾನು ಕೊಟ್ಟ ದುಡ್ಡಿಗಂತಲೂ ಅವಳು ಕೊಟ್ಟ ಬಟ್ಟೆಗಿಂತಲೂ ಅವಳು ಆಡಿದ ನಾಲ್ಕು ಮಾತುಗಳು ಮುದುಕಿಗೆ ಹೆಚ್ಚು ಸಂತೋಷವುಂಟು ಮಾಡಿರಬೇಕು. ದುಡ್ಡೋ, ಬಟ್ಟೆಯೊ ಆ ಭಿಕ್ಷುಕರ ಶರೀರಕ್ಕೆ ಸ್ವಲ್ಪ ಸುಖ ಕೊಟ್ಟಿರಬಹುದು.

ಮೂರ್ತಿರಾಯರ ಈ ಪ್ರಬಂಧ ‘ಕುರುಡ’ ಅತ್ಯುತ್ತಮ ಪ್ರಬಂಧಗಳಲ್ಲೊಂದು ಇದು ಕುರುಡ ಮತ್ತು ಆತನ ತಾಯಿಯ ನಲವತ್ತು ವರ್ಷಗಳ ಬದುಕಿನ ದಾರುಣ ಚಿತ್ರಣವನ್ನು ಹೃದಯಾಂಗವಾಗಿ ಪರಿಚಯಿಸುತ್ತದೆ. ಜೊತೆಗೆ ಪ್ರಬಂಧಕಾರ ಮಾನವೀಯತೆ ಮತ್ತು ಹೃದಯವಂತಿಕೆ, ದಯೆ ಅನುಕಂಪ ಮುಂತಾದ ಗುಣಗಳನ್ನು ವ್ಯಕ್ತಪಡಿಸುತ್ತದೆ.

---

ಅಡಿಟಿಪ್ಪಣಿ
೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೪೩, ಎ.ಎನ್.ಮೂರ್ತಿರಾವ್

'ಮಹರಾಜ ಕಾಲೇಜಿನ ಕಾಮನ್ ರೂಂ' ಎಂಬ ಪ್ರಬಂಧ ಮೂರ್ತಿರಾಯರ ವೃತ್ತಿ ಜೀವನದ ಅನುಭವವನ್ನು ಸೆರೆಹಿಡಿದಿದ್ದಾರೆ. ತಮ್ಮ ಕಾಲೇಜಿನಲ್ಲಿನ ಇದ್ದ ಸಹೋದ್ಯೋಗಿಗಳೊಂದಿಗೆ ಅವರು ಮಾಡಿದ ಕುಚೇಷ್ಟೆ ಹಾಸ್ಯ ವ್ಯಂಗ್ಯ ಸಮಸ್ಯೆ ಎಲ್ಲವೂ ದಾಖಲಾಗಿದೆ. ಪಾಶ್ಚಾತ್ಯದಲ್ಲಿನ ಸಂಸ್ಕೃತಿಯನ್ನು ಅಧ್ಯಾಪಕರು ತಮ್ಮ ಕಾಲೇಜಿನಲ್ಲಿ ಉಡುಪನ್ನು ಧರಿಸುವ ಮೂಲಕ ಅದು ಭಾರತೀಯರ ಸಂಸ್ಕೃತಿಗೆ ತೊಡಕು ಎಂದು ಪಾಶ್ವಾತ್ಯರ ಸಂಸ್ಕೃತಿಯನ್ನು ಮುಕ್ತ ಮನಸಿನಿಂದ ತಿರಸ್ಕರಿಸುತ್ತಾರೆ. ಆದರೆ ಕಾಮನ್ ರೂಂ ಸದಸ್ಯರ ಹಾಸ್ಯದ ಹೊಳೆಯನ್ನು ಮುಕ್ತ ಮನಸ್ಸಿನಿಂದ ವರ್ಣಿಸುತ್ತಾರೆ. ಇಲ್ಲಿನ ಅಧ್ಯಾಪಕರಲಲಿ ಒಬ್ಬೊಬ್ಬರಲ್ಲಿಯೂ ಒಂದೊಂದು ವೈಶಿಷ್ಟತೆ ಇರುತ್ತಿತ್ತು. ಗರಿಗರಿ ಇಸ್ತ್ರಿ ಪ್ಯಾಂಟು ಧರಿಸಿದ ಬಿರುಸುಮಾತಿನ ಆದರ ಮೃದು ಹೃದಯದ ಪ್ರಿನ್ಸಿಪಾಲ್ ಎನ್.ಎಸ್. ಸುಬ್ಬರಾಯರು ಹರಕಲು ಹೌನ್ ಧರಿಸಿದ್ದ ಕಣ್ಣಿಗೆ ಕಟ್ಟುಂತಿದ್ದ ಈ ವಿಷಯಗಳನ್ನು ಕುರಿತು ಲೇವಡಿಗಳು ಕಾಮನ್ ರೂಂ ತಳದ ಶೋಭೆಯನ್ನು ಇಂದಿನ ತಲೆಮಾರಿಗೆ ಜೀವಂತವಾಗಿರಿಸಿದ್ದಾರೆ.

"ಸಣ್ಣ ಕಥೆಯ ಹಾವಳಿ" ಪ್ರಬಂಧದಲ್ಲಿ ಕನ್ನಡ ಸಾಹಿತ್ಯದಲ್ಲಿ ಒಂದೊಂದು ಕಾಲ ಘಟಕದಲ್ಲಿನ ಸಾಹಿತ್ಯ ಪ್ರಕಾರಗಳು ಬೆಳಕಿಗೆ ಬಂದಿದೆ. ಕಥೆಗಳು ನಮ್ಮ ಸಾಹಿತ್ಯ ಪ್ರಕಾರದಲ್ಲಿ ಅತೀ ಪ್ರಾಚೀನಾವಾದದ್ದು. ಇಂತಹ ಸಾಹಿತ್ಯ ಪ್ರಕಾರದಲ್ಲಿ ಎದುರಾಗುವ ಸಮಸ್ಯೆಗಳನ್ನು ಕುರಿತು ಈ ಸಾಹಿತ್ಯ ಪ್ರಕಾರವನ್ನು ಟೀಕೆ ಮಾಡಿದ್ದಾರೆ ಪ್ರಬಂಧಕಾರರು. ಮುಖ್ಯವಾಗಿ ಹಳೆಯ ವಸ್ತುವನ್ನು ಮತ್ತು ಕಲ್ಪನೆಯ ಆದರ್ಶವಾಗಿದ್ದ ಕಾಲದಲ್ಲಿ ರಚನೆಯಾದ ಕಥೆಗಳನ್ನು ವಿರೋಧಿಸುತ್ತಾರೆ. ಸಣ್ಣಕತೆಯನ್ನು ಕುರಿತಂತೆ ಮೂರ್ತಿರಾಯರು.

[೧] ಈ ಸಣ್ಣಕಥೆ ಎಂಬ ಸಾಹಿತ್ಯರೂಪ ಸ್ವಲ್ಪಕಾಲ ಮಿತಿಮೀರಿ ಮೆರೆದು ಜನರಕಣ್ಣನ್ನು ಕುಕ್ಕುತ್ತಿದ್ದಾರೆ ಇದೆ ಕಾರಣವಿರಬೇಕು. ಆ ಸಾಹಿತ್ಯ ಪ್ರಬೇದ ಬೇಸರ ತಂದಿರುವುದರಿಂದ ಅವರ ಸಾಮಾಗ್ರಿಯ ಬೇಸರ ತಂದಿದೆ. ಬಾಯಲ್ಲಿ ಸಣ್ಣಕಥೆಯನ್ನು ಎಷ್ಟು ಹೊಗಳಿದರೂ ಹೃದಯದಲ್ಲಿ ಉತ್ಸಾಹವಿಲ್ಲ.

---

ಅಡಿ ಟಿಪ್ಪಣಿ

೧. ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೧೮೨, ಎ.ಎನ್.ಮೂರ್ತಿರಾವ್

ಒಟ್ಟಾರೆಯಾಗಿ ಈ ಪ್ರಬಂಧದಲ್ಲಿ ಮೂರ್ತಿರಾಯರು ಅಭಿಪ್ರಾಯ ಅಪ್ಪಹಾಕಿದ ಆಲದ ಮರದಂತೆ ಯಾವುದೇ ಒಂದು ಸಾಹಿತ್ಯ ಪ್ರಕಾರಕ್ಕೂ ತನ್ನ ಅಸ್ತಿತ್ವನ್ನು ಉಳಿಸಿಕೊಳ್ಳು ಅಧಿಕಾರವಿರುತ್ತದೆ. ಅದಕ್ಕೆ ಶರಣಾಗುವುದು ಸರಿಯಲ್ಲ ಎಂದಿದ್ದಾರೆ.

" ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು" ಎಂಬ ಪ್ರಬಂಧ ಮೂರ್ತಿರಾಯರ ಸ್ವಭಾವಕ್ಕೆ ಅನುಗುಣವಾಗಿದೆ. ಲಲಿತೆಯ ಒತ್ತಾಯದಿಂದಾಗಿ ಮನೆ ಕಟ್ಟಬೇಕಾದ ಪ್ರಸಂಗ ಬಂದಾಗ ಅದಕ್ಕೆ ಪ್ರಬಂಧಕಾರರು ಪಟ್ಟ ಬವಣೆ ಇಲ್ಲಿಯ ವಸ್ತುವಾಗಿದೆ. ಮನೆಯನ್ನು ಕಟ್ಟುವವರಿಗೆ ಒಂದು ಸಂದೇಶವನ್ನು ನೀಡುವ ಮಾಲಿಕ ಲೇಖಕರು ಈ ಪ್ರಬಂಧವನ್ನು ರಚನೆ ಮಾಡಿದ್ದಾರೆ.

ಆದರೆ ಕಷ್ಟವನ್ನು ನಾವು ಅನುಭವಿಸುತ್ತವೆ ಇತರರಿಗಾದರೂ ಅದರಿಂದ ಸುಳಿವಾಗಲಿ ಎನ್ನುವ ಸಾಹಸಿಗಳಿಗೆ ನಮ್ಮ ಕೃತಜ್ಞತೆ ಸಲ್ಲಿಸಬೇಕು. ಆದ್ದರಿಂದ ನಾನು ಯಾರನ್ನೂ [೧] ಮನೆ ಕಟ್ಟಿ ನೋಡಿ ಎಂದು ಮೂದಲಿಸುವುದಿಲ್ಲ. ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು ಕಟ್ಟಿಯೇ ಬಿಡಿ " ಎಂದು ಲೇಖಕರು ಉತ್ತೇಜನ ಕೊಡುತ್ತಾರೆ.

ನಾಗರಿಕತೆ ಬೆಳೆದಂತೆಲ್ಲಾ ಎಲ್ಲಾ ಸಮಾಜದಲ್ಲಿ ಮನೆಯ ನಿರ್ಮಾಣವನ್ನು ಮಾಡುವಾಗ ಮನುಷ್ಯನ ಆಸೆ ಆಕ್ಷಾಂಕ್ಷೆಗೆ ತಕ್ಕಂತೆ ಅದು ರೂಪ ಪಡೆಯುವಾಗ ಅದರ ಹಿಂದಿನ ಕಷ್ಟವನ್ನು ಲೇಖಕರು ಈ ಪ್ರಬಂಧದಲ್ಲಿ ವಿವರಿಸಿದ್ದಾರೆ. ಹರಟೆಯ ಮಲ್ಲ ಹಾಗೂ 'ಹರಟೆ ಮತ್ತು ಪ್ರಬಂಧ' ಎಂಬ ಪ್ರಬಂಧಗಳು ಅವರ ಸಾಹಿತ್ಯ ಮನೋಧರ್ಮಕ್ಕೆ ಪ್ರತೀಕವಾಗಿದೆ. ಪ್ರಬಂಧ, ಹರಟೆ ಇವೆರಡೂ ಇಂದು ತುಂಬ ಬಳಕೆಯಲ್ಲಿರುವ ಶಬ್ರಗಳು, ಇವುಗಳ ಸ್ವರೂಪವನ್ನು ನಿರ್ಧರಿಸುವುದು ಕಷ್ಟ ಆದರೆ ಈ ನಿಟ್ಟಿನಲ್ಲಿ ಮೂರ್ತಿರಾಯರು ಹರಟೆ ಮತ್ತು ಪ್ರಬಂಧಗಳೆರಡನ್ನೂ ಕುರಿತು ಎರಡೂ ಉತ್ತಮ ವಿವರಣ ಪ್ರಬಂಧಗಳನ್ನು ಬರೆದು ವಿಶ್ಲೇಷಣೆ ಮಾಡಿದ್ದಾರೆ.

"ಈ ಹರಟೆಯಲ್ಲಿ ಬಗ್ಗೆ ಅವರು 'ಬೋರ್' ಎಂಬ ಪದಕ್ಕೆ ಹರಟೆಯ ಮಲ್ಲ ಎಂದು ಅರ್ಥಕೊಡುವುದು ತಪ್ಪು ಎಂದು ನಿಸ್ಸಂದೇಹವಾಗಿ ಹೇಳುತ್ತೇನೆ. ಆ ಪದಕ್ಕೆ ತಕ್ಕ ಪ್ರತಿಪದ ಕನ್ನಡ__..

---

ಅಡಿಟಿಪ್ಪಣಿ
೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ .೧೮೨, ಎ.ಎನ್.ಮೂರ್ತಿರಾವ್

ಹರಟೆ ಮತ್ತು ಹರಟೆಯ ಮಲ್ಲ ಎಂಬುದು ಮಂಡಿಸುತ್ತಾರೆ. ಹರಟೆಯನ್ನು ಮೂರ್ತಿರಾಯರು ಯೌವನತುಂಬಿ ತುಳುಕುವ ಮುಗ್ಧೆಯ ಕಣ್ಣಿಗೆ ಹೋಲಿಸಿದ್ದಾರೆ. ಬಾಲ್ಯದಲ್ಲಿ ಅದರ ಸೊಬಗು ಅಡಿಗೆ ಎನ್ನುತ್ತಾರೆ. ಹರಟೆಯನ್ನು ಕುರಿತು ಇನ್ನೇನೂ ಇಲ್ಲದಿದ್ದರೂ ಹರಟೆ ಮನಸ್ಸಿಗೆ ಪ್ರಸನ್ನತೆಯನ್ನಾದರೂ ಕೊಡುತ್ತದೆಯಷ್ಟೆ. ಅದೇನು ಕಡಿಮೆ ಪ್ರಯೋಜನವೆ?

"ಹರಟೆ ಮತ್ತು ಪ್ರಬಂಧಗಳ" ನಡುವಿನ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಇಂಗ್ಲೀಷ್‌ನಲ್ಲಿನ ಎಸ್ಸ್ ಗೆ ಅವರು ಕನ್ನಡದಲ್ಲಿ ಲಲಿತ ಪ್ರಬಂಧ ಎಂಬ ಪದವನ್ನು ನೀಡಿದ್ದಾರೆ. ಪ್ರಬಂಧವನ್ನು ಮೂರ್ತಿರಾಯರು ಕೋಲ್ಮಿಂಚಲ್ಲಿ ಮಿನುಗು ಮಿಂಚು ಎನ್ನುತ್ತಾರೆ. ಪ್ರಬಂಧವೂ ವ್ಯಕ್ತಿಯ ವ್ಯಕ್ತಿತ್ವದ ಹೃದಯ ಮೂಲೆಯಲ್ಲಿ ಸಂಚರಿಸುವ ಅವಕಾಶವನ್ನು ನೀಡುತ್ತದೆ. ಹರಟೆ ಎನ್ನುವುದು ಹಲವಾರು ವ್ಯಕ್ತಿಯಿಂದ ಕೂಡಿರಬೇಕು. ಪ್ರಬಂಧಕ್ಕೆ ಆಪ್ತಮಿತ್ರನು ಇದ್ದರೆ ಸಾಕು ಎಂದಿದ್ದಾರೆ. ಗ್ರಾಮೀಣ ಪರಿಸರದ ಚಿತ್ರಣವನ್ನು ಚಿತ್ರಿಸಿದ್ದಾರೆ. ಗ್ರಾಮಗಳಲ್ಲಿ ಕಂಡು ಬರುವ ಹರಟೆಯ ಪದ್ಧತಿ ಜನಪದರಲ್ಲಿನ ನಿತ್ಯ ಜೀವನ ಬದುಕು ಸ್ಥಿತಿಯನ್ನು ಅದು ಪ್ರತಿಬಿಂಬಿಸುತ್ತದೆ. ಎಂದು ಈ ಪ್ರಬಂಧಗಳು ತಿಳಿಸುತ್ತವೆ. [೧] "ಅದು ಭಾವಪ್ರವಾಹದಲ್ಲಿ ಹೊರಟು ಒಂದು ಕಡೆದಡವನ್ನು ಸೇರಬೇಕು. ಆದ್ದರಿಂದ ಬರುವ ಫಲ ನಿರೀಕ್ಷಿತ ಫಲ.

ಮೂರ್ತಿರಾಯರು ತಮ್ಮ ಹುಟ್ಟೂರಾದ ಅಕ್ಕಿಹೆಬ್ಬಾಳಿಗೆ ಒಮ್ಮೆ ಹೋದಾಗ ಅವರಿಗೆ ಆದ ಅನುಭವದ ಕಥನವೇ 'ಅಕ್ಕಿಹೆಬ್ಬಾಳು' ಎಂಬ ಪ್ರಬಂಧವಾಗಿದೆ ಅಲ್ಲಿಯ ಅವರ ಬಾಲ್ಯದ ನೆನಪುಗಳು ಮತ್ತು ಊರಿನ ಬದಲಾವಣೆಯಿಂದ ಉಂಟು ಮಾಡಿದ ಬೇಸರದಿಂದ ಬಂದವರಿಗೆ ಅಲ್ಲಿಯಾದ ಪ್ರಕೃತಿಯ ಚಿತ್ರಣವನ್ನು ನೋಡಿ ಅವರ ಮನ ಸಂತೋಷಗೊಂಡು ಅನುಭವ ಹಾಗೂ ಊರಿನಲ್ಲಿದ್ದವರು. ಇಲ್ಲದವರು ಎಲ್ಲರ ಬಗ್ಗೆಯೂ ಆಡಿದ ಮಾತುಗಳು ಇವೆಲ್ಲವೂ ನಮ್ಮನ್ನು ಅಕ್ಕಿ ಹೆಬ್ಬಾಳನ್ನು ನಾವೇ ಪ್ರವೇಶಿಸಿದಂತೆ ಅನುಭವವಾಗುತ್ತದೆ.

ಅಕ್ಕಿ ಹೆಬ್ಬಾಳು ಮತ್ತು ಬೆಂಗಳೂರು ಎಂಬ ಪ್ರಬಂಧಗಳು ಒಂದು ಗುಂಪಿಗೆ ಸೇರಿದ ಪ್ರಬಂಧಗಳು, ಅಕ್ಕಿ ಹೆಬ್ಬಾಳು ಪ್ರಬಂಧದಲ್ಲಿ ಗ್ರಾಮೀಣ ಪರಿಸರದ ಸೊಗಡು ತಿಳಿಸುತ್ತದೆ. ಬೆಂಗಳೂರು ಪ್ರಬಂಧದಲ್ಲಿ ಇಂದಿನ ಬೆಂಗಳೂರಿನ ಚಿತ್ರಣವಿದೆ.

---

ಅಡಿಟಿಪ್ಪಣಿ

೧ ಸಮಗ್ರ ಲಲಿತ ಪ್ರಬಂಧ .ಪುಟ ಸಂಖೆ ೨೨೦ ಎ.ಎನ್.ಮೂರ್ತಿರಾವ್

ಒಂದು ಹಳ್ಳಿ ಮತ್ತೊಂದು ನಗರ. ಒಂದು ಶಿಥಲವಾಗುತ್ತಿರುವ ಪರಂಪರೆಯನ್ನು ಉಳಿಸುವ ಮೌಲ್ಯದ ಸಂಕೇತವಾದರೆ, ಇನ್ನೊಂದು ಪರಂಪರೆಯನ್ನು ತಿರಸ್ಕರಿಸವಂತಹದು ಬಂದ ಆತ್ಮೀಯವಾದುದು, ಮತ್ತೊಂದು ಪರಂತೇ ನೋಡುವುದು. ಒಂದು ಬಾಲ್ಯದ ಸವಿ ನೆನಪನ್ನು ತೋರಿಸದೆ. ಮತ್ತೊಂದು ಉದ್ಯೋಗ ಜೀವನದ ಗಡಿಬಿಡಿಯನ್ನು ಚಿತ್ರಿಸುತ್ತದೆ. ಮೂರ್ತಿರಾಯರು ಬಿ.ಎ. ಓದುತ್ತಿದ್ದಾಗ ತಮ್ಮ ತಂದೆಗೆ ಅನಾರೋಗ್ಯದ ಕಾರಣ ಅವರು ನಿಧನವನ್ನು ಹೊಂದಿದರು. ಇದನ್ನು ತಿಳಿದು ಅವರು ತಮ್ಮ ಊರಿಗೆ ಬರುವ ವೇಳೆಗೆ ಅವರ ಅಂತಿಮ ಸಂಸ್ಕಾರವೂ ಮುಗಿದು ಹೋಯಿತು. ಆದರೆ ಅವರು ಎರಡನೇ ಸಲ ಹೋದಾಗ ಒಂದು ಸುಂದರವಾದ ಬಿರಿದು ಪರಂಪರೆ ಪರಂಪರೆಯಿಲ್ಲವಾಯಿತು. ಅವರಿಗೆ ಅಲ್ಲಿ ಆತ್ಮೀಯತೆಗಿಂತ ಗೌರವ ಹೆಚ್ಚಾಗಿತ್ತು. ಆದರೆ ಅವರಿಗೆ ಸ್ನೇಹ ಸಿಗುವ ಸ್ಥಳದಲ್ಲಿ ಮರ್ಯಾದೆ ಸಿಕ್ಕಿದರೂ ಅವರಿಗೆ ಸಮಾಧಾನವಿಲ್ಲ. ಅಕ್ಕಿ ಹೆಬ್ಬಾಳಿನ ದೈವ ಸಾನಿಧ್ಯ ಅವರಿಗೆ ಪ್ರಿಯವಾಗಿತ್ತು. ಇದು ಬಾಲ್ಯದ ನೆನಪುಗಳನ್ನು ಪ್ರತಿನಿಧಿಸುತ್ತಿದ್ದವು. ಅಕ್ಕಿ ಹೆಬ್ಬಾಳು ಬಿರಿದು ಹಳ್ಳಿಯಲ್ಲಿ ಅದೊಂದು ಜೀವಂತ ಸಂಪ್ರಾದಾಯದ ಪ್ರತೀಕ ಒಂದು ಕಾಲದ ಜೀವನ ಪದ್ದತಿ. ಆಚಾರ ವಿಚಾರ ಸಂಸ್ಕೃತಿಯನ್ನು ತೆರೆದಿಡುತ್ತದೆ.

ಬೆಂಗಳೂರಿನ ಪರಿಸರವನ್ನು ಕುರಿತು ಕೈಗಾರಿಕೆಗಳಿಂದ ತುಂಬಿರುವ ನಗರ ಮತ್ತು ವಾಹನದ ದಟ್ಟವಾದ ಹೊಗೆಯಿಂದ ಪರಿಸರವಿಲ್ಲ ನಾಶವಾಗುತ್ತದೆ. ಮನುಷ್ಯರಲ್ಲಿ ಮಾನವೀಯತೆಯನ್ನು ನೋಡಲು ಸಾಧ್ಯವಾಗುವುದಿಲ್ಲ.

ಬೆಂಗಳೂರಿನಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಬೇಕಾದರೆ ಆತುರದ ಜೀವನ ಆಪ್ತ ಸ್ನೇಹಿತರೊಡೆನೆಯಾ ಮಾತಾಡಲೂ ವಿರಾಮವಿರುವುದಿಲ್ಲ.

ಬೆಂಗಳೂರಿನಲ್ಲಿದ್ದ ಪ್ರಕೃತಿಯ ಸೌಂದರ್ಯ ಮತ್ತು ನಗರದ ಸೌಲಭ್ಯಗಳು ವಿಲನ ಬಹುಬೇಗ ನಾಶವಾಗುತ್ತದೆ. ಸುತ್ತಮುತ್ತ ಇದ್ದ ಹಳ್ಳಿಗಳನ್ನೆಲ್ಲಾ ಈ ನಗರ ಭೂತ (ಬೆಂಗಳೂರು) ನುಂಗಿ ಜೀರ್ಣಿಸಿಕೊಂಡಿದೆ.

ನಾಗರೀಕತೆ ಬೆಳದಂತೆ ಗ್ರಾಮ ಪ್ರದೇಶಗಳು ಮತ್ತು ನಗರ ಪ್ರದೇಶಗಳು ಅಭಿವೃದ್ದಿಯನ್ನು ಹೊಂದದ ಕಡೆಗೆ ಮುಖಮಾಡುತ್ತದೆ. ನಗರ ಪ್ರದೇಶದಲ್ಲಿ ವಾಸಮಾಡುವರು ಅವರು ತಮ್ಮ ಊರಿಗೆ ಭೇಟಿ ನೀಡಿದಾಗ ಆಗುವ ವ್ಯತ್ಯಾಸ ಮತ್ತು ಗ್ರಾಮದ ಬದಲಾವಣೆಯನ್ನು ಅಲ್ಲಿನ ಪರಿಸರದ ಜನ

ಜೀವನದ ದೈನಂದಿನ ಬದುಕು ಎಲ್ಲಾವನ್ನು ತಿಳಿಯಲು ಕುತೂಹಲವಿರುತ್ತದೆ. ಇಂತಹ ವಸ್ತುವನ್ನು ಪ್ರಬಂಧಕಾರರು ತಮ್ಮ ಜೀವನದಲ್ಲಿ ನಡೆದ ಘಟನೆಯನ್ನು ಆಧಾರವಾಗಿಟ್ಟುಕೊಂಡು ಬರೆದ ಪ್ರಬಂಧವಾಗಿದೆ. ಇದು ಅವರ ಆತ್ಮ ಚರಿತ್ರೆಗೆ ಸಂಬಂಧಿಸಿದರು.

ಮೂರ್ತಿರಾಯರು ಹಳ್ಳಿ ಮತ್ತು ನಗರ ಪ್ರದೇಶವನ್ನು ಕುರಿತು ಒಂದು ಅವರ ಜನ್ಮಭೂಮಿ ಇನ್ನೊಂದು ಅವರ ಕರ್ಮಭೂಮಿ ಎಂದಿದ್ದಾರೆ.

'ದೆವ್ವಗಳನ್ನು ಕುರಿತು ' ಈ ಪ್ರಬಂಧದಲ್ಲಿ ಸಮಾಜದಲ್ಲಿನ ಜನರ ಮೂಡನಂಬಿಕೆಯನ್ನು ಮತ್ತು ಅವರ ಮನಸ್ಸಿನ ಡಾರ್ಬಲ್ಯವನ್ನು ವಿವರಿಸಿದ್ದಾರೆ. ದೆವ್ವಗಳು ತಾವು ದತ್ತ ಕಡೆಯೇ ಬಿದ್ದು ಸಾಯುತ್ತವೆ ಎಂಬ ಕಲ್ಪನೆಯ ಎಳೆಯನ್ನು ಹಿಡಿದು ಮೂರ್ತಿರಾಯರು ತುಂಬ ಹಾಸ್ಯ ಮಾಡಿದ್ದಾರೆ. ದೆವ್ವಗಳು ಎಲ್ಲೆಂದರಲ್ಲಿ ಹೋಗಬಲ್ಲವು . ಅವು ಪಾಸ್‌ಪೋರ್ಟ್ ಕಛೇರಿಗೆ ಅಲೆಯಬೇಕಾಗಿಲ್ಲ. ಸುಂಕದ ಕಟ್ಟೆಗಳಲ್ಲಿ ಹೇಳಿಕೆ ಕೊಡಬೇಕಾಗಿಲ್ಲ. ಟಿಕೆಟಿಗೆ ಹಣವಿಲ್ಲವೆಂದು ಚಿಂತಿಸಬೇಕಾಗಿಲ್ಲ. ಸುಂಕದ ಕಟ್ಟೆಗಳಲ್ಲಿ ಹೇಳಿಕೆ ಕೊಡಬೇಕಾಗಿಲ್ಲ ಟಿಕೆಟಿಗೆ ಹಣವಿಲ್ಲವೆಂದು ಚಿಂತಿಸಬೇಕಾಗಿಲ್ಲ. ಆದರೂ ಅವುಗಳ ಬುದ್ದಿಗೆ ಏನು ಮಂಕು ಬಂದಿದೆಯೋ ಗೊತ್ತಿಲ್ಲ. ದುಮರಣಕ್ಕೆಡಾದ ಎಡೆಯಲ್ಲೇ ಸುಳಿದು ಸಾಯುವುದು ಅವುಗಳ ಹಣೆಯ ಬರಹ.

ಈ ಪ್ರಬಂಧದಲ್ಲಿ ಸಾಮಾನ್ಯವಾಗಿ ತೀವ್ರ ಚಿಂತನೆ ಅನುಶೀಲನೆಗಳು ಕೊರತೆಯಿಂದ ಕುಸಿಯುವುದಿಲ್ಲ. ಮೂರ್ತಿರಾಯರು ಪ್ರಬಂಧದಲ್ಲಿ ಭಾರವನ್ನು ಹೊತ್ತು ನಿಲ್ಲದ ಹಡಗಿನಂತ ಬಿರಿದು ತಾತ್ವಿಕ ವಿಚಾರಗಳು ಲಾಸ್ಯಮಾಡುವುದುಂಟು ಅವುಗಳನ್ನು ಕುರಿತು ಅವರ ಪ್ರಬಂಧದ ಈ ಸಾಲು ಗಮನಾರ್ಹವಾಗಿದೆ.

'ನಾನು ಎಷ್ಟು ದೆವ್ವಗಳ ಕಥೆಗಳನ್ನು ಕೇಳಿದ್ದೇನೆ. ಹೇಳಿಯಾ ಇದ್ದೆನೆ. ಮುಕ್ಕಾಲು ಮೂರು ಮೀಸಪಾಲ ನನ್ನ ಸ್ವಂತ ಅನುಭವಕ್ಕೆ ಬಂದವಲ್ಲಿ ಉಳಿದವುಗಳಿಗೆ ಪ್ರಕೃತ್ಯತೀತವಾದ ಕಾರಣವನ್ನು ಹುಡುಕುವ ಅವಶ್ಯಕತೆ ಕಂಡು ಬಂದಿಲ್ಲ.

ಪ್ರಾಕೃತ್ಯತೀತವಾದ ರಹಸ್ಯವೊಂದಿಲ್ಲಿ, ಅದನ್ನು ಹುಡುಕುವ ಪ್ರವೃತ್ತಿಯೂ ನಮ್ಮಲ್ಲಿರಲಿ ಎಂಬ ಬಯಕೆ ಬಹುಶ: ನಮ್ಮೆಲ್ಲರಲ್ಲೂ ನೆಟ್ಟು ನಿಂತಿದೆ. ಆ ರಹಸ್ಸಯ ದೆವ್ವವಾಗಲಿ, ದೈವವಾಗಲಿ ನಮ್ಮ

ದೇಹದಲ್ಲಿ ನಡೆಯುತ್ತಿರುವ 'ಜೀವ' ಎಂಬ ರಾಸಾಯನಿಕ ಕ್ರಿಯೆನಿಂತ ಮೇಲೂ ಏನೋ ಒಂದು ಅಂಶ ಅಳಿಯದೆ ನಿಲ್ಲುತ್ತದೆಂಬ ನಂಬಿಕೆ ನಮಗೆ ಪ್ರಿಯವಾದದ್ದು ಅಷ್ಟು ಮಾತ್ರವಲ್ಲ ಆ ಅಂಶ ಉಳಿದಿರಲಿ, ಇಲ್ಲದಿರಲಿ ಅದರ ಭಯದ ಅಮಲಾದರೂ ನಮಗೆ ಪ್ರಿಯವಾದದ್ದು.

'ತೆರೆದ ಮನೆ ' ಮತ್ತು 'ನೀಲಕಂಠ' ಎರಡು ಪ್ರಬಂಧಗಳು ಮೂರ್ತಿರಾಯರನ್ನು ಮನಶಾಸ್ತ್ರಜ್ಞನ ಮಟಕ್ಕೇರಿಸುತ್ತದೆ. ತಮ್ಮ ಅಂತರಂಗವನ್ನು ಪರಿಶೀಲಿಸುವ ಮಟ್ಟಕ್ಕೆ ನೋಡುವ ಸಂಸ್ಕಾರವಂತರಿಗೆ ಮಾತ್ರವೇ ಸಾಧ್ಯವಾಗುವಂತಹ ಚಿಂತನೆ ಇಲ್ಲದೆ ಮೊದಲ ಪ್ರಬಂಧ ಮನುಷ್ಯರ ಮನಸ್ಥಿತಿಯನ್ನು ಪ್ರಚೋಧಿಸುವಂತಹದು. ಮನವರು ಮನಸ್ಸಿನ ಬಾಗಿಲನ್ನು ಮುಚ್ಚಿದರೆ ಆಗುವ ಅನರ್ಥಗಳನ್ನು ಮನಸ್ಸನ್ನು ತೆರೆದಿಟ್ಟಾಗ ಆಗುವ ಸಂತೋಷವನ್ನು ಇದಕ್ಕೆ ಇರುವ ವ್ಯತ್ಯಾಸವನ್ನು ಮನಶಾಸ್ತ್ರೀಯ ಹಿನ್ನಲೆಯಲ್ಲಿ ಅವರು ವಿವರಿಸಿದ್ದಾರೆ.

"ತೆರೆದ ಮನೆ " ಎಂದರೆ ಇದಕ್ಕೆ ಅನುಕೂಲವಾಗುವಂಥಾದ್ದು. ಪೂರ್ವಗ್ರಹಗಳು ರಾಕ್ಷಸನು ಪ್ರೀತಿ ಮತ್ತು ಅದಕ್ಕೆ ಸಂಬಂಧಪಟ್ಟ ಅನುಕಂಪ ಇತ್ಯಾದಿ ಗುಣಗಳು ದೇವತೆಗಳು, ಆಗಮಾರ್ಥಂತು ದೇವಾನು ಗಮನಾರ್ಥಯ ರಾಕ್ಷಸಂ ನಮ್ಮ ಮನವನ್ನು ತೆರೆದಿಡೋಣ.

ಇಲ್ಲಿ ನಾವು ಕಾಣುವುದು ಮಹಾ ಮಾನವತಾವಾದಿ ಮೂರ್ತಿರಾಯರನ್ನು "ನಾವು ನಕರಾತ್ಮವಾದ ನಿರಾಶಕ್ತಿಯನ್ನು ಬಿಟ್ಟು ಪ್ರೇಮವನ್ನು ಬೆಳಸಿಕೊಳ್ಳೋಣ" ಎಂಬ ವಾಕ್ಯವೇ ಈ ಪ್ರಬಂಧದ ಸಾರವಾಗಿದೆ.

ಎರಡನೇ ಪ್ರಬಂಧದಲ್ಲಿ ಮತ್ತೊಬ್ಬರ ವಿಚಾರದಲ್ಲಿ ಇರುವ ಕೂತುಹಲವನ್ನು ಎರಡು ರೀತಿಯಲ್ಲಿ ವರ್ಗಿಕರಿಸುತ್ತಾರೆ. ಒಂದು ಅಸಂಗತವಾದ ಕೂತೂಹಲ ಮತ್ತೊಂದು ಬೇರೆಯವರ ದು:ಖದಲ್ಲಿ ತೋರುವ ಅನುಕಂಪ ಮೂರ್ತಿರಾಯರು ತಮ್ಮ ಅನುಭವವನ್ನೇ ಇಲ್ಲಿ ವಿವಹರಿಸುತ್ತಾರೆ. ಒಮ್ಮೇ ಅವರ ಮನಸ್ಸಿಗೆ ನೆಮ್ಮದಿ ದೊರೆಯಿತು.

ಮೂರ್ತಿರಾಯರ ಪ್ರಬಂಧಗಳ ಅಧ್ಯಯನದ ಮಾನಸಿಕ ಪ್ರಸನ್ನತೆಯನ್ನು ಪಡೆಯುವ ಒಂದು ಸುಂದರ ಸಾಧನವಾಗುತ್ತದೆ.

ಮೂರ್ತಿರಾಯರ ಪ್ರಬಂಧಗಳಲ್ಲಿ ಉನ್ನತ ಮೌಲ್ಯದ ವಿವೇಚನೆಯುಳ್ಳ, ಮಾನವನ ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳಬಲ್ಲ ವಿಷಯ ಸಮಾಜದ ಎಲ್ಲಾ ಬಗೆಯ ಜನರೊಂದಿಗೆ ಆತ್ಮೀಯವಾಗಿ ಬೆರೆಯಬಲ್ಲ ಸಹೃದಯ ಪ್ರಬಂಧಕಾರ ವ್ಯಕ್ತಿತ್ವ ದರ್ಶನವಾಗುತ್ತದೆ.

ಮನುಷ್ಯ ಸ್ವಭಾವದಲ್ಲಿನ ಆಸಕ್ತಿ, ಇತರರನ್ನು ತೂಗಿ ನೋಡುವಾಗ ಆಗುವ ಅನುಕಂಪ, ಸಹನೆ, ಒಳ್ಳೇಯದು, ಎಲ್ಲಿದ್ದರೂ ಕಾಣುವ ಕಣ್ಣು ಒಂದು ವಿಷಯವನ್ನು ಅಥವಾ ಸನ್ನಿವೇಶವನ್ನು ಬೇರೆ ಬೇರೆ ದೃಷ್ಟಿಗಳಿಂದ ಕಾಣುವ ಶಕ್ತಿ ಚಿಂತನೆ ಇವುಗಳಿಂದ ಮೂರ್ತಿರಾಯರು ಈ ಕ್ಷೇತ್ರದಲ್ಲಿ ಅದ್ವಿತೀಯರನ್ನಾಗಿ ಮಾಡಿದೆ.

ಪ್ರಬಂಧಕಾರ ಪ್ರಕೃತಿ ಪ್ರೇಮ, ಪ್ರಕೃತಿಯ ಅಂಶಗಳು ವಿರೂಪಗೊಳಿಸುವ ಕೃತತೆ ಅಲಂಕಾರಗಳು ಸದ್ದುಗದ್ದಲಗಳು ಇಲ್ಲದೆ ಶಾಂತವಾದ ಸರಳ ಪ್ರವೇಶದಲ್ಲಿ ನೆಲ ಬಯಸುವ ಮನಸ್ಸು, ಸಮಾಜದ ಹೊಸ್ತಿಲಲ್ಲಿ ನಿಂತು ಹಳೆಯ ಸಂಪ್ರದಾಯದ ಕೆಲವೊಂದು ಹೊರತುಪಡಿಸಿ ಹೊಸ ಸಂಪ್ರದಾಯದ ವೈಜ್ಞಾನಿಕ ಮನೋಧರ್ಮದ ಬಗೆಗೆ ತೋರ ಬಯಸುವ ಉತ್ಸಾಹ – ಈ ಮನೋಧರ್ಮಗಳನ್ನು ಗುರುತಿಸಬಹುದಾಗಿದೆ.

ಮೂರ್ತಿರಾಯರು ವೈವಿಧ್ಯಮಯ ಜೀವನದ ಹರಿಬಲ ಅಲ್ಲಿದೆ. ರಸಿಕ ಪ್ರವೃತ್ತಿಯ ಎಳೆಯ ದಂಪತಿಗಳ ಜಗತ್ತಿನಿಂದ ಹಿಡಿದು ಕಾರ್ ರಿಪೇರಿ, ಪೋನ್ ಗೊಂದಲ, ಹರಕೆಯ ಚಪಲಿ, ಮನೆ ಕಟ್ಟುವ ಬವಣೆ, ದೆವ್ವ, ಅಥಿತಿ, ಹೋಟೆಲ್ ಗಳ ಅನುಭವ ನಗರ ಗ್ರಾಮಗಳ ಬದುಕಿನ ಸೌಮ್ಯ ವೈಶಿಷ್ಯಮಯಗಳು. ಹೀಗೆ ವಿಸ್ತಾರವಾದ ವಸ್ತುಗಳು ಪ್ರಬಂಧಗಳಲ್ಲಿ ಜೀವವನ್ನು ಪಡೆದುಕೊಂಡಿದೆ.

## ಅಧ್ಯಾಯ – ೬

## ಗೊರೂರು ಮತ್ತು ಎ.ಎನ್.ಮೂರ್ತಿರಾವ್ ರವರ ಪ್ರಬಂಧ ಸಾಹಿತ್ಯದ ತೌಲನಿಕ ಅಧ್ಯಯನಗಳು.

ಗ್ರಾಮೀಣ ಪ್ರದೇಶವಾಗಲಿ ನಗರ ಪ್ರದೇಶವಾಗಲಿ ಯಾವುದೇ ಒಬ್ಬ ವ್ಯಕ್ತಿಗೂ ತಾನಿದ್ದಂತಹ ಸಮಾಜದ ಅಥವಾ ಪ್ರದೇಶದಿಂದ ದೂರನಿಂತು ಆ ಪರಿಸರವನ್ನು ವಿಮರ್ಶಿಲಾರ ಆ ಎರಡು ಸಮಾಜಗಳು ಒಂದು ಘಟಕ ಒಂದು ಅಣುವೆನಿಸಿಕೊಳ್ಳವ ಆತ ಗ್ರಾಮೀಣ ಪ್ರದೇಶದಿಂದ ಅನುಭವಗಳನ್ನು ಒಂದಾದರು ಪಡೆಯಬಹುದು ಅನುಭವದ ಸ್ವರೂಪ ಇನ್ನೊಂದು ಬಗೆಯಿದೆ. ಆ ವ್ಯಕ್ತಿಗಳು ಸಮಾಜದ ಹಿತಾಸಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಅವರ ಸಮಸ್ಯೆಗಳನ್ನು ಅದರ ಸ್ವರೂಪ ಅಂತರ್ಯವನ್ನು ಪ್ರಜ್ಞಾ ಪೂರ್ವಕವಾಗಿ ಶೋಧಿಸುವ ಮತ್ತು ಅದರ ವ್ಯವಸ್ಥೆಗೆ ತನ್ನಲ್ಲಿ ಸಾಧ್ಯತೆಗಳೊಂದಿಗೆ ಪ್ರಕ್ರಿಯಿಸುವ ರೀತಿ ಬೇರೆಯಾಗಿರುತ್ತದೆ.

ಹೀಗೆ ಹಲವು ನೆಲೆಗಳಲ್ಲಿ ಚೇತರಿಸಿಕೊಳ್ಳುವ ಆ ವ್ಯಕ್ತಿಯ ಪ್ರಕೃತಿಯೊಡನೆ ಸಂಬಂಧ, ಸಾಮಾಜಿಕ ಪ್ರಜ್ಞೆ, ಜಾತಿ, ಮತ, ಧರ್ಮ, ಪರಂಪರೆ, ಸಂಸ್ಕೃತಿ ಶೋಷಣೆ, ಸಂಸಾರಿಕ ಚಿತ್ರಣ ಭಾಷೆ ಜನಜೀವನ ಸ್ಥಿತಿಗತಿ ಇತ್ಯಾದಿಗಳ ನೆಲೆಯಲ್ಲಿ ವೈಯಕ್ತಿಕ ಅನುಭವಗಳ ಸಂವೇದನೆಗಳ ನಿರೂಪಣೆಯಾಗುತ್ತದೆ ಲೇಖಕರ, ಕಾದಂಬರಿ, ಕಾವ್ಯವಾಗಲಿ, ಅವರ ಚಿಂತನತಗಳು ಹಲವು ಬಗೆಯಲಿ ಪ್ರಕಟಗೊಳ್ಳುತ್ತವೆ. ಈ ಎಲ್ಲಾ ಹಿನ್ನೆಲೆಯಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್.ಮೂರ್ತಿರಾವ್ ರವರ ಪ್ರಬಂಧಗಳಲ್ಲಿ ಪ್ರಮುಖವಾಗಿ ಕೇಂದ್ರ ಪ್ರಜ್ಞೆಯಾವುದುಂದರೆ ಸಮಾಜ. ಅಂದರೆ ಸಾಮಾಜಿಕ ಪ್ರಜ್ಞೆಯ ಹಿನ್ನಲೆಯಲ್ಲಿ ಉಳಿದ ಅಂಶಗಳನ್ನು ನಾವು ಅವಲೋಕಿಸುವುದು.

ಗೊರೂರು ಮತ್ತು ಎ.ಎನ್. ಮೂರ್ತಿರಾವ್ ರವರು ಪ್ರಬಂಧಗಳನ್ನು ಕಂಡು ಬರುವ ಸಾಮಾಜಿಕ ವಿಚಿತ್ರ ನಡುವಳಿಕೆಗಳು ಆಲದ ಮರದ ಬೇರಿನಂತೆ ಬೇರು ಬಿಟ್ಟಿರುವ ಸಂಪ್ರಾದಾಯಗಳು, ಸಮಾಜದಲ್ಲಿನ ಮೂಡನಂಬಿಕೆಗಳು, ಆಚಾರ – ವಿಚಾರಗಳು, ಸುತ್ತಮುತ್ತಲಿನ ಪರಿಸರಗಳು, ಕೆಲಸಕ್ಕೆ ಬಾರದ ಮೌಲ್ಯಗಳು. ಬದುಕಿನ ಆಡಂಬರಗಳು ಮೊದಲಾದ ವಿಚಾರಗಳನ್ನು ಕುರಿತು ಅವರ ಅಭಿವ್ಯಕ್ತಿಸುವ ವಿಧಾನವನ್ನು ನಾವು ಅಧ್ಯಯನ ಮಾಡಬಹುದಾಗಿದೆ ಹೀಗೆ ಮೆಲಿನ ಅಂಶಗಳಲ್ಲಿ

ಸಮಾಜದ ವಾಸ್ತವತೆಯ ಸತ್ಯವನ್ನು ಪರಿಣಾಮಕಾರಿಯಾಗಿ ಅನಾವರಣಗೊಳಿಸುವ ಮೂಲಕ ಹೆಚ್ಚು ಪ್ರಮಾಣಿಕ ಪ್ರಯತ್ನ ಮಾಡಿದ್ದಾರೆ ಎನ್ನಬಹುದು ಪ್ರಬಂಧಗಳಲ್ಲಿನ ವಸ್ತು ಭಾಷೆ, ಶೈಲಿ, ಸರಳತೆಯ ಹಿನ್ನೆಲೆಯಲ್ಲಿ ಈ ಪ್ರಬಂಧಕಾರ ಪ್ರಬಂಧಗಳನ್ನು ತೌಲನಿಕ ಅಧ್ಯಯನದ ಮೂಲಕ (ವಿವರಿಸಿದ್ದೇನೆ)

ಗೊರೂರು ಮತ್ತು ಎ.ಎನ್.ಮೂರ್ತಿರಾವ್ ಅವರು ಸಮಾಜವನ್ನು ಕಂಡುಕೊಂಡ ರೀತಿ ಇಬ್ಬರ ಪ್ರಬಂಧಕಾರಲ್ಲಿ ಕಂಡು ಬರುತ್ತದೆ. ಗೊರೂರು ಸಾಮಾಜಿಕ ವಸ್ತುವಿನ ಪ್ರಬಂಧಗಳು ಸಮಸ್ಯೆಗಳ ವಿವರಿಸಿ ವಿಶ್ಲೇಷಿಸುತ್ತದೆ. ಆದರೆ ಪರಿಹಾರಗಳು ನೀಡುವುದಿಲ್ಲ. ಸಮಸ್ಯೆ ಹಾಗೆಯೇ ಉಳಿದು ಬಿಡುತ್ತದೆ. ಆದರೆ ಮೂರ್ತಿರಾವ್ ಅವರ ಪ್ರಬಂಧಗಳ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ನಾವು ಕಂಡುಕೊಳ್ಳಬಹುದು ಬದುಕಿಗೆ ಸಂಬಂಧಿಸಿದ ಹಲವಾರು ವಿಷಯಗಳು ಅವರನ್ನು ಪ್ರಬಂಧ ಬರೆಯಲು ಪ್ರೇರಿಪಿಸಿವೆ. ಇಂತಹ ವಸ್ತುಗಳನ್ನು ಪ್ರಬಂಧಗಳಲ್ಲಿ ಅವರು ಅನಾವರಣ ಮಾಡಿದ್ದಾರೆ.

"ಜನಪದ ಜೀವನಕ್ಕೆ ದೀಪಾವಳಿಯ ಸ್ಫೂರ್ತಿ" ಪ್ರಬಂಧದಲ್ಲಿ ಗೊರೂರು ಮನುಷ್ಯ ಮನುಷ್ಯರ ನಡುವಿನ ಸಂಬಂಧವನ್ನು ಅಚ್ಚುಕಟ್ಟಾಗಿ ಚಿತ್ರಿಸಿದ್ದಾರೆ. ಹಬ್ಬ ಎಂದರೆ ಒಂದು ಸಡಗರ ಸಂಭ್ರಮದ ಸಂಕೇತವಾಗಿದೆ ಆದರೆ ಅಲ್ಲಿ ಗಂಡಸತ್ತ ಒಂದು ವರ್ಷಕಾಲ ಯಾವ ಹಬ್ಬವನ್ನೂ ಮಾಡಬಾರದೆಂದು ಅತ್ತ ಕಟ್ಟುನಿಟ್ಟಾಗಿ ಹೇಳುತ್ತಿದ್ದಾಗಲೂ ಪುಟ ಮಕ್ಕಳ ಕಾಟವನ್ನು ತಡೆಯಲಾರದೆ ಗೋಕುಲಾಷ್ಟಮಿ ಹಬ್ಬವನ್ನು ಆಚರಿಸುವ ಸೀತಮ್ಮನ ಸಾಹಸ ಓದುಗರ ಕಣ್ಣಿಲ್ಲ ನೀರು ತರಿಸುತ್ತದೆ. ಆದರೆ ಪ್ರಸ್ತುತ ಸಮಾಜದಲ್ಲಿ ಮನುಷ್ಯ ಮನುಷ್ಯರ ನಡುವೆ ನಡೆಯುವ ಒಂದು ಸಂಘರ್ಷದ ಪ್ರಭಾವ ಪುಟ್ಟ ಮಕ್ಕಳ ಮೇಲೆ ಪರಿಣಾಮ ಬೀರುತ್ತದೆ. ಹಾಗೂ ಸಮಾಜದಲ್ಲಿನ ಕಟ್ಟುಪಾಡುಗಳು ಮನುಷ್ಯ ಸಂತೋಷವನ್ನು ಹೇಗೆ ಅಪರಹರಿಸಿವೆ ಎಂಬುದು ಅದರಲ್ಲೂ ಸ್ತ್ರೀಯರೇ ಅಂತಹ ಸಂತೋಷವನ್ನು ಕಳೆದುಕೊಳ್ಳಬೇಕಾಗುತ್ತದೆ ಎಂದು ವಿವರಿಸುತ್ತದೆ.

ಇಂತಹ ಕಟ್ಟು ಪಾಡುಗಳಿಗೆ ಅವರ ಪರಿಹಾರವನ್ನು ಸೂಚಿಸುವುದಿಲ್ಲ. ಇಂತಹ ವಿಧವೆಯ ಸಮಾಜವನ್ನು ಎ.ಎನ್. ಮೂರ್ತಿರಾವ್ ರವರ 'ಗೌರಜ್ಜಿ' ಪ್ರಬಂಧದಲ್ಲಿ ಕಂಡು ಬರುತ್ತದೆ. 'ಗೌರಜ್ಜಿ' ವಿಧವೆ ಆದರೆ ಗೌರವಯುಕ್ತ ಜೀವನ ನಡೆಸುವ ಸಾತ್ವಿಕ ಜೀವ. ತಂದೆ ತಾಯಿ ಅಜ್ಜಿ ಅವರ ಆತ್ಮೀಯತೆಯ ಪ್ರತೀಕವೆನಿಸಿದ್ದಾರೆ. ಅಜ್ಜಿ ಮೊಮ್ಮಕ್ಕಳ ಭಾವನಾತ್ಮಕ ಸಂಬಂಧ ಅತ್ಯಂತ ಮಧುರವೂ. ಹಿತಕರವೂ ಆದುದು. ಇಂದಿನ ಗೌರಜ್ಜಿಯ ಮಾನಸಿಕ ತುಡಿತ ಮಿಡಿತ ತಲ್ಲಣಗಳು ಇಲ್ಲಿ ಚಿತ್ರತವಾಗಿದೆ.

ಮೂರ್ತಿರಾಯರು ಈ ಪ್ರಬಂಧದಲ್ಲಿ ಗೌರಜ್ಜಿಯ ವ್ಯಕ್ತಿತ್ವದ ಚಿತ್ರಣದ ಮೂಲಕ ಸಾಮಾಜಿಕ ಬದುಕಿನ ಒಂದು ಮುಖವನ್ನು ಪರಿಚಯಿಸಿದ್ದಾರೆ ಇಬ್ಬರು ಪ್ರಬಂಧಕಾರರು ಚಿತ್ರಿಸಿರುವ ಇಬ್ಬರು ವಿದವೆಯ ಚಿತ್ರಣದಲ್ಲಿ ಇಲ್ಲಿ ಭಿನ್ನವಾಗಿದ್ದರೂ ಮನಸ್ಸಿನ ತುಡಿತಗಳನ್ನು ಸಾಮ್ಯತೆಯನ್ನು ನಾವು ಮನಗಾಣಬಹುದು.

ಪ್ರಬಂಧಗಳಲ್ಲಿ ವಸ್ತು ಸಾಮ್ಯತೆಯಿದ್ದರೂ ಸಂಪ್ರದಾಯಕ್ಕೆ ನೀಡಿದ ಅಭಿವ್ಯಕ್ತಿ ಭಿನ್ನವಾಗಿದೆ. ಸಮಾಜದಲ್ಲಿ ಚಿತ್ರಣವಾಗಿರುವ ಅಭಿವ್ಯಕ್ತಿ ಭಿನ್ನವಾಗಿದೆ. ವಿಧವೆಯ ಪಾತ್ರದ ಮೂಲಕ ಸಂಪ್ರಾದಾಯವನ್ನು ಟೀಕೆ ಮಾಡುವ ಮೂಲಕ ಇಬ್ಬರು ಪ್ರಬಂಧಕಾರರು ತಮ್ಮ ತಮ್ಮ ಸಾಮಾಜಿಕ ಕಳಕಳಿಯನ್ನು ಪ್ರತಿಧ್ವನಿಸಿದ್ದಾರೆ.

ಪರಮತದ ಒಬ್ಬ ಮೌಲ್ವಿ ಕನ್ನಡ ಕಲಿತು ಅದರ ಸೇವೆಗೆ ಸಲ್ಲುವ ಚಿತ್ರಣ ನೀಡುವ ಗೊರೂರು 'ಕನ್ನಡ ಮೌಲ್ವಿ' ಮತ್ತು 'ಲಲಿತೆಯ ವಿದ್ಯಾಭ್ಯಾಸ' ಪ್ರಬಂಧ ಮೂಲಕ ಮೂರ್ತಿರಾವ್ ಮಹಿಳೆಯರಿಗೆ ವಿದ್ಯಾಭ್ಯಾಸದ ಅವಶ್ಯಕತೆಯನ್ನು ಸಾರುವುದು ಇವೆರಡು ಸಮಾಜಕ್ಕೆ ಉತ್ತಮ ಸಂದೇಶವನ್ನು ಸಾರುವಲ್ಲಿ ಯಶಸ್ವಿಯಾಗಿದೆ. 'ಕನ್ನಡ ಮೌಲ್ವಿ' ಪ್ರಬಂಧ ಹಿಂದೂ ಮತ್ತು ಭಾರತೀಯ ಪರವಾದದ್ದು. ಅವರ ಕಾಣುವ ಆದರ್ಶ ಅವನು ಚೆನ್ನಾಗಿ ಕನ್ನಡವನ್ನು ಕಲಿತಿದ್ದಾನೆ. ಹಿಂದು ಮುಸ್ಲಿಂ ಮೌಲ್ವಿಯ ಮೂಲಕ ವಾಸಿಸುವ ನೆಲ ಜಲ ಭಾಷೆಗಳನ್ನು ಗೌರವಿಸಬೇಕು ಅದನ್ನು ಉಳಿಸಿ ಬೆಳಸಿರಬೇಕು ಎಂಬ ಅಂಶವನ್ನು ಕನ್ನಡ ನಾಡಿನಲ್ಲಿ ವಾಸಿಸುವ ಎಲ್ಲಾ ಜನರು ತಿಳಿಯಬೇಕು.

ಒಂದು ಭಾಷೆಯಲ್ಲಿ ಅದಕ್ಕೆ ಲಿಪಿ ಇಲ್ಲದಿದ್ದರೂ ಅದು ಹೇಗೆ ಸಂಮೃದ್ದವಾಗಿದೆ. ನಮ್ಮ ಭಾಷೆಯಾಗಲಿ ಬೇರೆ ಭಾಷೆಯಾಗಲಿ ನಾವು ತಾರತಮ್ಯ ಮಾಡಬಾರದು ಎಂಬುದು "ಒಂದು ಆದಿವಾಸಿಗಳ ಜನಪದ ಸಂಸ್ಕೃತಿ' ಪ್ರಬಂಧದಲ್ಲಿ ವಿವರಿಸಿದೆ. ಮುಂಡಾ ಭಾಷೆಗೆ ಲಿಪಿಯ ಬಳಕೆ ಇಲ್ಲ. ಅದರಲ್ಲಿ ಬಹಳಷ್ಟು ಸಾಹಿತ್ಯರಚನೆಯಾಗಿದೆ ಎಂದು ತೋರಿಸಿಕೊಟ್ಟಿದ್ದಾರೆ. ಎಂದು ಭಾಷೆಯನ್ನು ಬೆಳೆಸುವ ಮನುಷ್ಯನು ಅದನ್ನಾಡುವ ಜನರಲ್ಲಿರಬೇಕು. ಆದಾಗ ಮಾತ್ರ ಭಾಷೆ ಸದೃಢವಾಗುತ್ತದೆ ಎಂಬುದನ್ನು ತಿಳಿಸಿ ಭಾಷಾಭಿಮಾನ ಬೆಳೆಸಿಕೊಳ್ಳಬೇಕೆಂದು ಸೂಚಿಸುತ್ತದೆ.

ಮೂರ್ತಿರಾವರ ಲಲಿತೆಯ ವಿದ್ಯಾಭ್ಯಾಸ ಪ್ರಬಂಧವೂ ಸಹ ಒಂದು ಜಾಗೃತಿಯನ್ನು ಮೂಡಿಸುತ್ತದೆ. ಪ್ರಸ್ತುತ ಸಮಾಜದಲ್ಲಿ ಇಂಗ್ಲೀಷ್ ಭಾಷೆಯ ಅರಿವನ್ನು ಮೂಡಿಸುತ್ತದೆ. ಲಲಿತೆಯ ಮೂಲಕ ಒಂದು ಭಾಷೆಯ ಬೆಳವಣಿಗೆಯನ್ನು ನೋಡಬಹುದಾಗಿದೆ. ಪ್ರಬಂಧಕಾರರು ಮಹಿಳೆಯನ್ನು

ಜಾಗೃತಿ ಮಾಡಲು ಕರೆಯನ್ನು ನೀಡಿದ್ದಾರೆ. ಆದರೆ ಗೊರೂರು ಭಾಷೆಯ ಬೆಳವಣಿಗೆಯ ಕರೆಯನ್ನು ನೀಡಿದ್ದಾರೆ.

ಗೊರೂರು ಮತ್ತು ಮೂರ್ತಿರಾಯರ ಈ ಪ್ರಬಂಧಗಳು ಇಂದಿನ ಸಮಾಜದಲ್ಲಿ ವಿದ್ಯಾವಂತರೆನಿಸಿಕೊಂಡು ಜನರ ಭಾಷೆಗಳ ಸಾಂಗತ್ಯವಿಲ್ಲದ ಅನಿಸಿಕೆಗಳನ್ನು ಬಹುಸೊಗಸಾಗಿ ಲೇವಡಿ ಮಾಡುತ್ತಾರೆ. ಹಾಗೂ ಕಲ್ಪನಾ ಲೋಕದ ಇಂತಹ ಲೆಕ್ಕಾಚಾರಕ್ಕೂ ವಾಸ್ತವತೆಗೂ ಅಜಗಜಾಂತರ ವ್ಯಾತ್ಯಾಸಗಳನ್ನು ಹೊಂದಿರುತ್ತದೆ ಎಂಬ ಮಹತ್ವನ್ನು ತಿಳಿಸುತ್ತಾರೆ. ಸಮಾಜದ ಜೊತೆಗೆ ತಮ್ಮ ಪ್ರಬಂಧಗಳ ಮೂಲಕ ಸಂವಹನ ಬಳಸಿ ಸಂವಾದಕ್ಕೆ ತೊಡಗುವ ಈ ಇಬ್ಬರೂ ನಮ್ಮ ಜೊತೆಗೆ ಇರುವ ನಮಗೆ ಗೊತ್ತಿಲ್ಲದ ವಿಷಯಗಳ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾರೆ. ಸಮಾಜದಲ್ಲಿನ ಒಂದು ಭಾಷೆಯ ಸಮ್ಮುಖದಲ್ಲಿ ನಡೆಯುವ ಏರು ಪೇರುಗಳು ಆದರಿಂದ ಆಗುವ ಪರಿಣಾಮಗಳನ್ನು ಜನರಲ್ಲಿ ಜಾಗೃತಿಯನ್ನುಂಟು ಮಾಡಲು ಸಹಕಾರಿಯಾಗುತ್ತವೆ. ಈ ಮೂಲಕ ಇಬ್ಬರು ಪ್ರಬಂಧಕಾರರು ಪ್ರಬಂಧಗಳು ವಿಶಿಷ್ಟವಾಗಿದೆ.

ಗೊರೂರು ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳಲ್ಲಿ ಆಧುನಿಕ ಜಗತ್ತಿಗೆ ಹೊಂದಿಕೊಳ್ಳುವ ಜನರು ತಮ್ಮ ತಮ್ಮ ಸ್ವಾರ್ಥದಿಂದ ಮಾನವೀಯ ಮೌಲ್ಯಗಳನ್ನು ಕಳೆದುಕೊಳ್ಳುತ್ತಾರೆ. ಸಂಬಂಧಗಳು ಯಾಂತ್ರಿಕತೆಯ ಪ್ರಭಾವದಿಂದ ಛಿದ್ರಗೊಂಡಿವೆ ಇಂತಹ ಸಂದರ್ಭದಲ್ಲಿ ರಚಿತವಾಗಿರುವ ಪ್ರಬಂಧಗಳು ಪ್ರಬಂಧಕಾರರು ಅದರಿಂವುಂಟಗುವ ಪರಿಣಾಮವನ್ನು ಚಿತ್ರಿಸಿದ್ದಾರೆ. ಒಂದು ಸಮಾಜವೂ ಬೆಳವಣಿಗೆಯಾದಂತೆ ಅದರ ಹಿಂದೆ ಮಾನವನ ಕೈವಾಡವಿರುತ್ತದೆ. ಅಂದರೆ ಸಾಮಾಜಿಕ ಪ್ರಜ್ಞೆಯನ್ನು ಹೊಂದಿರುತ್ತದೆ. ಗೊರೂರು 'ದಿ ವಿಲೇಜ್ ಪೋಸ್ಟಮನ್' 'ನಮ್ಮ ಊರು ಬಸ್ಸು' 'ದ್ಯೂತ ಪ್ರಸಂಗ' 'ಅಂತರಾಷ್ಟ್ರೀಯ ಮಹಿಳಾ ವರ್ಷ' ಪ್ರಬಂಧಗಳು ಹೆಸರು ಸೂಚಿಸುವಂತೆ ಇದು ಆಧುನಿಕತೆ ಸಂಕೇತವಾಗಿದೆ.

ಗೊರೂರರು 'ದಿ ವಿಲೇಜ್ ಪೋಸ್ಟ್‌ಮ್ಯಾನ್' ಪ್ರಬಂಧದಲ್ಲಿ ಆಧುನಿಕತೆಯ ಸಂಕೇತವಾದ 'ಪೋಸ್ಟ್' ಸಮಾಜದಲ್ಲಿ ಬಂದಿದ್ದರಿಂದ ಉಂಟಾದ ವಿಷಾದ ಮತ್ತು ಉಪಯೋಗವನ್ನು ತಿಳಿಸುತ್ತದೆ ಮತ್ತು 'ನಮ್ಮ ಊರು ಬಸ್ಸು' ಪ್ರಬಂಧ ಆರಂಭದಲ್ಲಿ ಸಮಾಜದಲ್ಲಿ ಗ್ರಾಮೀಣ ಪ್ರದೇಶಗಳಿಗೆ ವ್ಯವಸ್ಥಿತಾವಾದ ಸೌಕರ್ಯವನ್ನು ಮಾಡಿರುವುದಿಲ್ಲ. ಆದರಿಂದವುಂಟುಮಾಡುವ ತೊಂದರೆಯಾಗಲಿ

ಅದೇ ತೊಂದರೆಗೆ ಅವರ ಬದಲಾವಣೆಯಾಗುವುದು ಈ ಪ್ರಬಂಧದ ಅಂಶವಾಗಿವೆ ಎಂದು ಗುರುತಿಸಬಹುದಾಗಿದೆ.

ಅದೇ ರೀತಿ ಮೂರ್ತಿರಾಯರ 'ದಿವಾನ ಖಾನೆಯ ಅಂದ ಚೆಂದ' ಆಧುನಿಕ ಸಂಬಂಧಗಳಿಗೆ ಒಂದು ಉದಾಹರಣೆಯಾಗಿದೆ. ಗಂಡ ಹೆಂಡತಿಯರ ನಡುವೆ ನಡೆಯುವ ಮನಸ್ತಾಪಗಳಿಗೆ ಉದಾಹರಣೆಯಾಗಿದೆ. 'ಬೆಂಗಳೂರು' ಎಂಬ ಪ್ರಬಂಧದಲ್ಲಿ ಪರಿಸರದ ವಿನಾಶವನ್ನು ಕುರಿತು ಚರ್ಚಿಸಿದ್ದಾರೆ. ನಮ್ಮ ಸುತ್ತಮುತ್ತಲಿನ ಪರಿಸರ ಎಲ್ಲ ನಗರದ ಅಭಿವೃದ್ಧಿ ಎಂದು ಸಾವಿರಾರು ಮರವನ್ನು ನೆಲ ಸಮಮಾಡಿ ಬೃಹತ್‌ಕಾರವಾದ ಕಟ್ಟಡಗಳಲ್ಲಿ ನಿರ್ಮಾಣದ ಮೂಲಕ ಮಾನವನು ವಿನಾಶದ ಕಡೆಗೆ ಮುಖ ಮಾಡಿರುವುದನ್ನು ಚಿತ್ರಿಸಿದ್ದಾರೆ.

ಇಲ್ಲಿ ನಮಗೆ ಪ್ರಸ್ತುತವೆನಿಸುವ ಗೊರೂರು ಮತ್ತು ಎ.ಎನ್.ಮೂರ್ತಿರಾವ್ ರವರ ಪ್ರಬಂಧಗಳಲ್ಲಿನ ವಸ್ತುವೂ ಸಾಹಿತ್ಯದ ಎಲ್ಲಾ ಪ್ರಕಾರಗಳಲಿ ಕಂಡು ಬರುತ್ತದೆ. ಏಕೆಂದರೆ ಸಾಹಿತ್ಯದ ಯಾವುದೇ ವಸ್ತು ಅದು ಸಮಾಜದೆ ಆಗಿರುತ್ತದೆ. ಸದೃಶ ಸಾಹಿತ್ಯ ಸಮಾಜದ ನಿಕಟ ಸಂಬಂಧ ಪರಿಚಯಿಸುದುತ್ತದೆ. ಇಂದಿನ ಪೀಳಿಗೆಗೆ ಈ ಸಾಮಾಜಿಕ ಪ್ರಜ್ಞೆಯನ್ನು ಸಮರ್ಪಕವಾಗಿ ಪರಿಚಿಸುತ್ತಾರೆ ಪ್ರಬಂಧಗಳು ನಮಗೆ ಹಲವು ವಿಧಗಳಲ್ಲಿ ಹತ್ತಿರವಾದ ದಾರಿಯಾಗಿದೆ.

ಗೊರೂರು ಮತ್ತು ಮೂರ್ತಿರಾವ್ ರವರು ಮನುಷ್ಯ ಸ್ವಭಾವದಲ್ಲಿನ ಆಸಕ್ತಿ ಇತರರನ್ನು ತೂಗಿ ನೋಡುವ ಅನುಕಂಪ, ಸಹನೆ ಒಳ್ಳಿಯದು ಕಾಣುವ ಕಣ್ಣು ಒಂದು ವಿಷಯವನ್ನು ಅಥವಾ ಸನ್ನಿವೇಶವನ್ನು ಬೇರೆ ಬೇರೆ ದೃಷ್ಟಿಗಳಿಂದ ಕಾಣುವ ಶಕ್ತಿ ಚಿಂತನೆ, ಸಾಮಾನ್ಯ ಸಂಗತಿಯಿಂದ ಪ್ರಾರಂಭವಾಗಿ ಸಹಜವಾಗಿ ದೀರ್ಘವಾದ ಚಿಂತನಾಯಕ್ತವಾಗಿ ಸಾಗುವ ವೈಖರಿ, ಲವಲವಿಕೆಯ ಪ್ರಸನ್ನವಾದ ಶೈಲಿಯೊಡನೆ ಗೊರೂರು ಮತ್ತು ಮೂರ್ತಿರಾವ್ ರವರ ಪ್ರಬಂಧಗಳಲ್ಲಿ ಕಾಣಬಹುದು,ಹಾಗಾಗಿ ಇವರಿಬ್ಬರೂ ಈ ಕ್ಷೇತ್ರದಲ್ಲಿ ಅದ್ವಿತೀಯರಾಗಿದ್ದರೆ

ಗೂರೂರು ತಮ್ಮ ಪ್ರಬಂಧಗಳಲ್ಲಿ ಪ್ರಬಂಧ ನಿರೂಪಿಸುವ ವಸ್ತು ಎಂದರೆ ಹೇಮಾವತಿ ನದಿಯ ಸುತ್ತ ಮುತ್ತಲಿನ ಪರಿಸರ, ಮೂರ್ತಿರಾಯರ ಪ್ರಬಂಧಗಳಲ್ಲಿ ಪ್ರಬಂಧ ನಿರೂಪಕನ ಪತ್ನಿ 'ಲಲಿತೆಯ ಪ್ರಬಂಧಗ'ಳಲ್ಲಿ ಅಂತರ್ಗತವಾಗಿ ಪ್ರವಹಿಸುತ್ತಾ ಪ್ರಬಂಧಕ್ಕೆ ಪೋಷಣೆಯನ್ನು ನೀಡುತ್ತಾರೆ. ಸಮಾಜದಲ್ಲಿ ಗೊರೂರು ಪರಿಸರಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಈ ಇಬ್ಬರು

ಪ್ರಬಂಧಕಾರರಲ್ಲಿ ಸಮಾಜದಲ್ಲಿನ ಸಮಕಾಲೀನ ಪರಿಸ್ಥಿತಿಗಳನ್ನು ಅನುಭವಗಳ ಮೂಲಕ ಅಭಿವ್ಯಕ್ತ ಮಾಡಿದ್ದಾರೆ. ಅಂದರೆ ನಮ್ಮ ಸಮಾಜದಲ್ಲಿ ನಮ್ಮ ಸುತ್ತಮುತ್ತಲಿನ ಪರಿಸರ ಹಾಗೂ ಸಂಸಾರಿಕ ಚಿತ್ರಣದ ನಿಲುವುಗನ್ನು ಪ್ರಕಟ ಪಡಿಸುತ್ತಾರೆ.

ಗೊರೂರು ಪ್ರಬಂಧಗಳಲ್ಲಿ ಸಂಪ್ರಾದಾಯಿಕ ಚೌಕಟ್ಟಿನ ಹಿನ್ನೆಲೆಯನ್ನು ಒಳಗೊಂಡೀವೆ ಅದರೆ ಮೂರ್ತಿರಾಯರಿಗೆ ಪ್ರಬಂಧ ರಚನೆ ಮಾಡುವಾಗ ಇಂತಹ ಯಾವುದೇ ಉದ್ದೇಶ ಇದ್ದಂತಿಲ್ಲ. ಕೇವಲ ಸ್ವಂತಕ್ಕಾಗಿ ಬಂದವು. ಗೊರೂರು ಪ್ರಬಂಧಗಳಲ್ಲಿ ದೇಸಿಯ ಶೈಲಿ ಕಂಡು ಬರುತ್ತದೆ. ಗೊರೂರು ಅವರು ಸಂಸ್ಕೃತ ಶಬ್ದಗಳ ಬಳಕೆಯನ್ನು ಮಾಡಿದ್ದಾರೆ. ಮೂರ್ತಿರಾಯರು ಸಂಸ್ಕೃತ ಶಬ್ದಗಳನ್ನಾಗಲಿ, ಕಾವ್ಯ ಭಾಗಗಳನ್ನಾಗಲೀ, ಸಂಭಾಷಿತಗಳನ್ನಾಗಲಿ ಪ್ರಬಂಧಗಳಲ್ಲಿ ಉಲ್ಲೇಖಿಸಿದವರಲ್ಲ. ಇದರಿಂದ ಮೂರ್ತಿರಾಯರ ಪ್ರಬಂಧಗಳು ಒಂದೇ ದಿಕ್ಕಿನತ್ತ ಸಾಗಿದ ವಿಷಯ ವಸ್ತುಗಳುಳ್ಳ ಪ್ರಬಂಧಗಳು.

ಗೊರೂರು ಹಾಗೂ ಮೂರ್ತಿರಾಯರ ನಡುವೆ ಸಾಮ್ಯತೆಗಳು ಇಲ್ಲವೆಂಥಲ್ಲ. ಗೊರೂರು 'ಹೇಮಾವತಿ ತೀರದಲ್ಲಿ' ಎಂಬ ಪ್ರಬಂಧವನ್ನು ಮೂರ್ತಿರಾಯರ 'ಅಕ್ಕಿ ಹೆಬ್ಬಾಳು' ಪ್ರಬಂಧದೂಂದಿಗೆ ಹೋಲಿಸಬಹುದು. ಇದ್ದರಿಂದ ಪ್ರಬಂಧಕಾರರ ಮನೋಧರ್ಮವನ್ನು ತಿಳಿಯಬಹುದು.

ಗೊರೂರು 'ಗಾಂಪರೊಡೆಯರ ಜೈನಯಾತ್ರೆ' ಮತ್ತು 'ವಿರೋಧಭಾಸ' ಮೂರ್ಖ ಶಿಷ್ಯರ ಜೊತೆಯಲ್ಲಿ ನಡೆಯುವ ಯಾತ್ರೆ, ಹಾಗೂ ಬಸ್ಸಿನಲ್ಲಿ ಪ್ರಯಾಣ ಮಾಡುವ ಒಬ್ಬ ಯುವಕನ ಮನಸ್ಥಿತಿಯನ್ನು ಚಿತ್ರಿಸುತ್ತದೆ. ಯಾತ್ರೆಯಲ್ಲಿ ನಡೆಯುವ ಅನಾಹುತಗಳಿಗೆ ಕಾರಣರಾಗುವ ಶಿಷ್ಯರು ಅವರ ಅರಿವಿಲ್ಲದೇ ಮಾಡುವ ಕೆಲಸಗಳು ತಮ್ಮ ಗುರುವಿನ ಪ್ರಾಣವೇ ಹೋಗುವ ಮಟ್ಟಕ್ಕೆ ಬರುತ್ತದೆ. 'ವಿರೋಧಭಾಸ' ಬಸ್ಸಿನಲ್ಲಿ ಪ್ರಯಾಣ ಮಾಡುವ ಯುವಕನಿಗೆ ಸ್ಥಳವಕಾಶ ದೊರೆಯದಿದ್ದಾಗ ಅವನ ಮನಸ್ಸಿನಲ್ಲಿ ನಡೆಯುವ ಮಾನಸಿಕ ತೊಲಲಾಟವನ್ನು ಚಿತ್ರಿಸಿದ್ದಾರೆ. ಆದರೆ ಮೂರ್ತಿರಾಯರ "ತೆರೆದ ಮನ" ಮತ್ತು 'ನೀಲಕಂಠ' ಪ್ರಬಂಧಗಳು ಅಂತಹುದೇ ಮನಸ್ಸಿನ ಸ್ಥಿತಿಗಳು ಬಹಿರಂಗವಾಗಿ ಪ್ರಕಟ ಪಡಿಸಲು ಪ್ರಯತ್ನಿಸುವುದನ್ನು ತೆರೆದ ಮನ, ಆಂತರಿಕ ಮನಸ್ಸು, ಕೂತೂಹಲದ ರೂಪವಾಗಿ ಪರಿವರ್ತನೆಯಾಗುತ್ತದೆ ಎಂಬುದು ಅವರ ನೀಲಕಂಠ ಪ್ರಬಂಧದಲ್ಲಿ ಕಾಣಬಹುದು.

ಮೂರ್ತಿರಾವ್ ತೆರೆದ ಮನ ಮತ್ತು ನೀಲಕಂಠ ಪ್ರಬಂಧಗಳು ಯಾವುದೇ ಒಂದು ವಿಷಯಕ್ಕೆ ಸಂಬಂಧಿಸಿದಂತೆ ಮನುಷ್ಯರ ಬದುಕಿನಲ್ಲಿ ನಡೆಯುವ ಘಟನೆಗಳಾಗಿರಬಹುದು. ಅಥವಾ ಸಂಗತಿಯಾಗಿರಬಹುದು. ಅದನ್ನು ತೆರೆದ ಮನಸ್ಸಿನಿಂದ ಸ್ವೀಕರಿಸಬೇಕಾಗುತ್ತದೆ. ಎರಡನೇ ಪ್ರಬಂಧ ಮತ್ತೊಬ್ಬರ ವಿಚಾರದಲ್ಲಿರುವ ಕುತೂಹಲವನ್ನು ಎರಡು ರೀತಿಯಲ್ಲಿ ವರ್ಗೀಕರಿಸುತ್ತಾರೆ. ಒಂದು ಅಸಂಗತವಾದ ಕುತೂಹಲ ಮತ್ತೊಂದು ಬೇರೆಯವರ ದು:ಖದಲ್ಲಿ ತೋರುವ ಅನುಕಂಪಗಳು ವಿವರಿಸುತ್ತಾರೆ.

ಗೊರೂರು ಮತ್ತು ಎ.ಎನ್.ಮೂರ್ತಿರಾವ್ ಈ ಪ್ರಬಂಧಗಳು ಸಮಾಜದಲ್ಲಿನ ಮನುಷ್ಯರ ಮನಸ್ಥಿತಿಯನ್ನು ಕುರಿತಂತೆ ಪ್ರಸ್ತಾಪ ಮಾಡಲಾಗಿದೆ. ಇವು ಮನೋವೈಜ್ಞಾನಿಕ ಹಿನ್ನೆಲೆಯೇ ರಚನೆಯಾಗಿವೆ. ತಮ್ಮ ಅಂತರಂಗವನ್ನೂ ಒಳಹೊಕ್ಕಿ ನೋಡುವ ಸಂಸ್ಕಾರವಂತರಿಗೆ ಮಾತ್ರವೇ ಸಾಧ್ಯವಾಗುವ ಚಿಂತನೆಗಳು ಈ ಪ್ರಬಂಧಗಳಲ್ಲಿ ಕಂಡು ಬರುತ್ತದೆ. ಗೊರೂರು ಮತ್ತು ಮೂರ್ತಿರಾವ್ ಸಮಾಜದಲ್ಲಿ ಮತ್ತು ಸಾಹಿತ್ಯದಿಂದ ಸಂಸ್ಕೃತಿಯೂ ಉಗಮದ ಬಗ್ಗೆ ಚಿಂತನೆಗಳಿವೆ. ಸಮಾಜ ಮತ್ತು ಸಂಸ್ಕೃತಿ ಮಾನವ ಜೀವನದ ಹಿನ್ನೆಲೆಯ ಅಧ್ಯಯನಗಳ ಮೂಲಕ ಪರಸ್ಪರ ಸಂಬಂಧವನ್ನು ಕ್ಷೀರಸಾಗರ ಮಥನದ ಬಗೆಗಿನ ರೂಪಕ ಮೂಲಕ ನಮ್ಮ ಮುಂದೆ ಅತ್ಯಂತ ಚಿತ್ರವತ್ತಾಗಿ ಗೊರೂರು ಮತ್ತು ಮೂರ್ತಿರಾಯರು ನಿಲ್ಲಿಸುತ್ತಾರೆ.

ಒಟ್ಟಾರೆಯಾಗಿ ಗೊರೂರು ಮತ್ತು ಮೂರ್ತಿರಾವ್ ರವರ ಸಾಹಿತ್ಯದಲ್ಲಿನ ಸಾಮಾಜಿಕ ಪ್ರಜ್ಞೆ ಒಬ್ಬ ಸಾಮಾನ್ಯ ಮನುಷ್ಯ ಅವನು ತನ್ನ ಇತರ ವ್ಯಕ್ತಿಗಳ ಜೊತೆಯಲ್ಲಿರುತ್ತದೆ. ತನ್ನ ಸಮಾಜದಲ್ಲಿ ಒಂಟಿ ಎನ್ನುವ ವ್ಯಕ್ತಿಯನ್ನು ಕೆಲವುಮಟ್ಟಿಗಾದರೂ ವಿವರಿಸುತ್ತದೆ. ಒಬ್ಬ ವ್ಯಕ್ತಿ ಹಾಗೂ ಒಂದು ಸಮಾಜ ವ್ಯಕ್ತಿ ಆಗಿದ್ದಾಗಿಯೂ ಅವುಗಳ ಹೊರಗೆ ಸಂಬಂಧಾತ್ಮಕವಾಗಿ ಮಾತನಾಡುವ ವ್ಯಕ್ತಿತ್ವ ವಿಶೇಷದ್ದಾಗಿರುತ್ತದೆ. ಆ ಸಮಾಜದ ಹಿನ್ನೆಲೆಯಲ್ಲಿ ಒಂದು ವ್ಯಕ್ತಿಗೆ ಒಂದು ನೋಟವಿರುತ್ತದೆ. ಆ ಆಧಾರದ ಮೇಲೆ ರಚಿಸಿದ ಕೃತಿಗಳು ಪ್ರಬಂಧಗಳು ಸಾಮಾಜಿಕ ಚಿಂತನೆಯನ್ನು ಒಳಗೊಂಡಿವೆ.

**ಗ್ರಾಮೀಣ ಬದುಕು**

ಗ್ರಾಮೀಣ ಪ್ರದೇಶದಲ್ಲಿ ಯಾವುದೇ ಒಬ್ಬ ವ್ಯಕ್ತಿಯ ತಾನಿದ್ದಂತಹ ಪ್ರದೇಶದಿಂದ ಹೊರನಿಂತು ಆ ಪರಿಸರವನ್ನು ವಿಮರ್ಶಿಸಲಾರ. ಗ್ರಾಮೀಣ ಪ್ರದೇಶ ಒಂದು ಘಟಕ. ಪ್ರಬಂಧಕಾರರು ಗ್ರಾಮೀಣ

ಪ್ರದೇಶದಿಂದ ಪಡೆಯವಂತಹ ಅನುಭವಗಳು ಒಂದಾದರೆ ಅದರಿಂದ ಪಡೆಯಬಹುದಾದ ಅನುಭವದ ಸ್ವರೂಪ ಇನ್ನೊಂದು ಬಗೆಯದು.

ಆದರೆ ಸ್ವರೂಪ ಆಂತರ್ಯವನ್ನು ಪ್ರಜ್ಞಾ ಪೂರ್ವಕವಾಗಿ ಶೋಧಿಸುವ ಹೀಗೆ ಹಲವು ನೆಲೆಗಳಲ್ಲಿ ಚೇತರಿಸಿಕೊಳ್ಳುವ ಆ ವ್ಯಕ್ತಿಯ ಪ್ರಕೃತಿಯೊಡನೆ ಸಂಬಂಧ, ಸಾಮಾಜಿಕ ಪ್ರಜ್ಞೆ, ಜಾತಿ, ಮತ, ಧರ್ಮ, ಪರಂಪರೆ ಸಂಸ್ಕೃತಿ, ಶೋಷಣೆ, ಭಾಷೆ, ಜನಜೀವನ ಸ್ಥಿತಿಗತಿ ಇತ್ಯಾದಿಗಳ ನೆಲೆಯಲ್ಲಿ ವೈಯಕ್ತಿಕ ಅನುಭವಗಳ, ಸಂವೇದನೆಗಳ ನಿರೂಪಣೆಯಾಗಿದೆ ಲೇಖಕರಲ್ಲಿ ಕಥೆಯಾಗಲಿ, ಕಾವ್ಯಯಾಗಲಿ, ಪ್ರಬಂಧವಾಗಲಿ, ಕಾದಂಬರಿಯಾಗಲಿ, ಹಲವು ಬಗೆಯಲ್ಲಿ ಪ್ರಕಟಗೊಳ್ಳುತ್ತದೆ. ಎಲ್ಲದರ ಹಿನ್ನೆಲೆಯಲ್ಲಿ ಗೊರೂರು ಮತ್ತು ಮೂರ್ತಿರಾಯರ ಪ್ರಬಂಧಗಳಲ್ಲಿ ಕೂಡಿರಬಹುದಾದ ಹಳ್ಳಿಯನ್ನು ಕೇಂದ್ರವಾಗಿರುವ ವಸ್ತುವನ್ನು ನೋಡಬಹುದಾಗಿದೆ.

ಗೊರೂರು ಮತ್ತು ಮೂರ್ತಿರಾಯರ ಕಥೆ ಕಾದಂಬರಿಗಳಿಗೆ ಸ್ಫೂರ್ತಿ ನೀಡಿರುವಂತೆ, ಪ್ರಬಂಧಗಳಿಗೂ ಹಳ್ಳಿಯೇ ಸ್ಫೂರ್ತಿಯ ಸೆಲೆಯಾಗಿದೆ. 'ಹೇಮಾವತಿಯ ತೀರದಲ್ಲಿ', 'ಬೆಟ್ಟದ ಮನೆಯಲ್ಲಿ', 'ಬಿಂದಿಗಮ್ಮನ ಜಾತ್ರೆ' ಹೇಮಾವತಿಯ ತೀರದಲ್ಲಿನ ನದಿಯ ಪಾತ್ರವನ್ನು ವಿವಿಧ ಜಾತಿಗಳವರು ಹಂಚಿಕೊಂಡಿರುವ ಬಗ್ಗೆ, ನದಿಯಲಿ ಹಣತೆಗಳನ್ನು ತೇಲಿ ಬರುವ ದೃಶ್ಯ ಸೌಂದರ್ಯಗಳು ನದಿಯ ತೀರದ ಸ್ಮಶಾನದ ವರ್ಣನೆ, ಹೀಗೆ ಈ ಪ್ರಬಂಧ ಹಲವು ಸುಂದರ ಚಿತ್ರಗಳನ್ನು ತೆರೆದಿಡುತ್ತದೆ. ಗೊರೂರು ಹಳ್ಳಿಯ ಸೌಂದರ್ಯ ಕುರಿತಂತೆ.

ಚಿತ್ರ ಮೌಕ್ತಿಕಗಳನ್ನು ಪೋಣಿಸಿ ಹಿಡಿದಿರುವ ರೇಷ್ಮೆಯ ದಾರವೇ ಆಗಿದೆ ಎನ್ನಲಾಗಿದೆ. ಜಾನಪದ ಪ್ರಜ್ಞೆಯನ್ನು ಜನ ಜೀವನಕ್ಕೆ ಅನ್ವಯಿಸಿ ಗೊರೂರ ನೀಡಿರುವ ಗ್ರಾಮೀಣ ಜೀವನದ ಕೆಲವು ಚಿತ್ರಗಳು ಪ್ರಬಂಧದ ರೂಪವನ್ನು ಪಡೆದುಕೊಂಡಿದೆ.

ಮೂರ್ತಿರಾಯರ ಗಾಡಿಯ ಪ್ರಯಾಣ ಮತ್ತು ಹೂವುಗಳು, ಪ್ರಣಯ ಯಾತ್ರೆ ಪ್ರಬಂಧ ರೈಲುಗಾಡಿಯ ಒಳಗಿನ ಪ್ರಪಂಚದ ಹಾಗೂ ಪ್ರಯಾಣಿಕರ ಮನಸ್ಸಿನ ಒಳ ತೋಟಗಳು ಚಿತ್ರತವಾಗಿದರೆ. ಪ್ರಕೃತಿಯ ಮುಕ್ತ ವಾತಾವರಣದ ನಡುವಣ ಒಂದು ಹಿತಕರವಾದ ಹಾಗೂ ಪ್ರಸನ್ನವಾದ ಅನುಭವವನ್ನು ಚಿತ್ರಿಸುತ್ತದೆ.

ಪ್ರಣಯಯಾತ್ರೆ ಮತ್ತೊಂದು ಮನೋಹರ ಪ್ರಬಂಧ, ಹಾಸ್ಯ, ಪ್ರಣಯ, ಪ್ರೇಮ ಗ್ರಾಮೀಣ ಪರಿಸರದಲ್ಲಿ ಆವರಣಗಳು ಇಲ್ಲಿ ಪರಸ್ಪರ ಮೇಳೈಸಿವೆ.

ಗೊರೂರು ಮತ್ತು ಮೂರ್ತಿರಾಯರು, ಪ್ರಬಂಧಗಳು ಹಳ್ಳಿಯ ಬದುಕಿನ ಚಿತ್ರಣದ ಜೊತೆಗೆ ಒಂದು ಸುಂದರವಾದ ಪ್ರಕೃತಿಯ ವಿಸ್ಮಯಗಳನ್ನು ತೆರೆದಿಡುತ್ತದೆ. ಈ ಪ್ರಬಂಧಗಳಲ್ಲಿ ಒಂದು ಪ್ರಕೃತಿಯಲ್ಲಿನ ಮುಕ್ತ ವಾತವಾರಣವನ್ನು ತೆರೆದಿಡುತ್ತದೆ. ಹಾಗೂ ಅದರ ಉಪಯುಕ್ತತೆಯನ್ನು ತಿಳಿಸುತ್ತದೆ. ಮೂರ್ತಿರಾಯರಲ್ಲಿ ಸಂಸಾರಿಕ ಚಿತ್ರಣವನ್ನು ನೋಡಬಹುದಾಗಿದೆ. ಹಳ್ಳಿಯ ಸಾಂಸರಿಕ ಜೀವನ ನಡುವೆಯಲ್ಲಿ ಅವರ ಒಂದು ಸುಂದರ ಪ್ರಪಂಚವನ್ನು ನೋಡಬಹುದಾಗಿದೆ.

ಗೊರೂರರು ಮತ್ತು ಮೂರ್ತಿರಾಯರು ವರ್ಣಿಸುವ ಗ್ರಾಮೀಣ ಬದುಕು ಮತ್ತು ಪರಿಸರ ಅಕ್ಷಯ ನಿಧಿ. ಅಂದರೆ ಅದನ್ನು ಕಾಣುವ ಕಣ್ಣೂ, ಗ್ರಹಿಸುವ ಮನಸ್ಸು ಇರಬೇಕು. ಜೊತೆಗೆ ಆ ಬದುಕಿನ ಬಗೆಗೆ ಅಪಾರವಾದ ಸಹಾನುಭೂತಿಯೂ ಬೇಕಾಗುತ್ತದೆ .

ಗೊರೂರು ಶ್ಯಾನುಭೋಗ, ಹೇಮಾವತಿ ನದಿ ತೀರದಲ್ಲಿ, ಶಾಲುಸಾಬಿ ಪ್ರಬಂಧಗಳಲ್ಲಿ ಶ್ಯಾನುಭೋಗ ಒಬ್ಬ ವಿದ್ಯಾವಂತ ಒಂದು ಹಳ್ಳಿಯ ಮುಖ್ಯ ವಿಚಾರದ ಹಣಕಾಸು, ಕಾಗದ ಪತ್ರಗಳ ವ್ಯವಹಾರವನ್ನು ಮಾಡುವವನು ಶ್ಯಾನುಭೋಗನ ಗುಣವನ್ನು ಚಿತ್ರಿಸುತ್ತದೆ. ವ್ಯಕ್ತಿ ಚಿತ್ರಗಳನ್ನು ಕೊಡುವಾಗ ಗುಣ ದೋಷಗಳೆರಡನ್ನು ಗೊರೂರು ಗಮನಿಸುತ್ತಾರೆ. ಅನಗತ್ಯವಾದ ಪ್ರಶಂಸೆಯಾಗಲೀ ಅನಾವಶ್ಯಕವಾದೆ ಖಂಡನೆಯಾಗಲಿ ಇಲ್ಲಿ ನುಸುಳದಂತೆ ನೋಡಿಕೊಳ್ಳುತ್ತಾರೆ.

ಮೂರ್ತಿರಾಯರ ಬೆಂಗಳೂರು ಮತ್ತು ಅಕ್ಕಿಹೆಬ್ಬಾಳು ಪ್ರಬಂಧಗಳು ಗ್ರಾಮೀಣ ಪರಿಸರದ ಸೊಗಡು ಸೂಸುತ್ತವೆ. ಬೆಂಗಳೂರು ಪ್ರಬಂಧದಲ್ಲಿ ಇಂದಿನ ಬೆಂಗಳೂರಿನ ಚಿತ್ರಣವಿದೆ. ಬೆಂಗಳೂರು ಮೈಸೂರುಗಳ ಅಂತರ, ಬೆಂಗಳೂರು ಒಳಗೊಂಡಿರುವ ವಿಶ್ವ ಸಂಸ್ಕೃತಿ, ಬೆಂಗಳೂರು ಕೂಡ ಬದಲಾವಣೆಗೆ ಒಳಗಾಗಿರುವದು ಇವು ಇಲ್ಲಿಯ ವಸ್ತು.

ಅಕ್ಕಿ ಹೆಬ್ಬಾಳು ಮೂರ್ತಿರಾಯರ ತಮ್ಮ ಹುಟ್ಟೂರಿಗೆ ಒಮ್ಮೆ ಹೋದಾಗ ಅಲ್ಲಿನ ಅನುಭವದ ಕಥನವೇ 'ಅಕ್ಕಿ ಹೆಬ್ಬಾಳು' ಎಂಬ ಪ್ರಬಂಧವಾಗಿದೆ. ಅಲ್ಲಿಯ ಕೃಷ್ಣ ಭಟ್ಟನ ಮಡು, ಕೂಪ್ಪರಿಗೆ ಮಡುವಿನಲ್ಲಿ ಅವರು ಈಜುತ್ತಿದ್ದಾಗ ಬಂದ ಕಲ್ಯಾಣದಾಸ ಆ ಊರಿನಲ್ಲಿದ್ದವರು. ಇಲ್ಲದವರು ಎಲ್ಲರ

ಬಗೆಯೂ ಆಡಿದ ಮಾತು. ಇವೆಲ್ಲವನ್ನು ಗಮನಿಸಿದರೆ ಅಕ್ಕಿ ಹೆಬ್ಬಾಳನ್ನು ನಾವೇ ಪ್ರವೇಶಿಸಿದ ಅನುಭವವಾಗುತ್ತದೆ.

ಗೊರೂರರು ಮೂರ್ತಿರಾಯರ ಪ್ರಬಂಧಗಳೂ ಹೆಚ್ಚಾಗಿ ಸಾಹಿತಾತ್ಮಕ ಹಾಗೂ ಸ್ವಾನುಭವ ಪೂರ್ಣವಾಗಿವೆ. ಮೂರ್ತಿರಾಯರ ಅಕ್ಕಿ ಹೆಬ್ಬಾಳಿನಂತೆ ಗೊರೂರರಿಗೆ ಗೊರೂರು ಪ್ರಬಂಧಗಳಲ್ಲಿ ಕಲ್ಪನೆಯ ಹೆಚ್ಚಾಗುತ್ತದೆ. ಆದರೆ ಮೂರ್ತಿರಾಯರ ಪ್ರಬಂಧಗಳಲ್ಲಿ ಇಂತಹ ಕಲ್ಪನೆಗಳು ಕಣ್ಮರೆಯಾಗುತ್ತಿರುವ ಜಾನಪದ ಸಂಸ್ಕೃತಿ ಪರಂಪರೆ ಸಂಪ್ರದಾಯಗಳನ್ನು ಪ್ರಬಂಧಗಳಲ್ಲಿ ಅಮರಗೊಳಿಸುವ ಪ್ರಯತ್ನ ಗೊರೂರು ರವರದು. ಆದರೆ ಮೂರ್ತಿರಾಯರಂತೆ ಎಲ್ಲಿಯೂ ನಿರಾಶೆಯ, ನೋವಿನ ಎಳೆಯಿಲ್ಲ ದನಿಯಿಲ್ಲ, ಬದಲಾಗಿ ಹಾಸ್ಯ, ವಿನೋಧ ವಕ್ರೋಕ್ತಿ ಇಲ್ಲವೆ ಒಟ್ಟಿನಲ್ಲಿ ಇವರ ಬರವಣಿಗೆಗಳು ಸಮತೂಕವನ್ನು ಸಾಧಿಸಿವೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಪ್ರಬಂಧ ಪ್ರಪಂಚಕ್ಕಿಂತ ಮೂರ್ತಿರಾಯರ ಪ್ರಪಂಚ ಕೊಂಚ ವಿಸ್ತಾರವಾದದ್ದು. ಗೊರೂರು ಪ್ರಬಂಧಗಳು ಹೇಮಾವತಿ ನದಿ ತೀರದಲ್ಲಿ, ಗ್ರಾಮೀಣ ಪರಿಸರದಲ್ಲಿನ ಸೃಷ್ಟಿಯಾಗುತ್ತದೆ. ಜೊತೆಗೆ ಶ್ಯಾನುಭೋಗ, ಪಟೇಲ ಮುಂತಾದ ಗ್ರಾಮಸ್ಥರನ್ನು ಗೊರೂರರ ಪ್ರಬಂಧಗಳಲ್ಲಿ ಕಾಣುತ್ತೇವೆ.

ಹೀಗೆ ಗೊರೂರರ ಪ್ರಬಂಧಗಳಲ್ಲಿ ಗ್ರಾಮೀಣ ಪರಿಸರ ಒಂದು ಗುಣವಾಗಿ ಏರ್ಪಡುತ್ತದೆ. ಗೊರೂರಿಗೆ ಹೋಲಿಸಿ ನೋಡಿದಾಗ ಮೂರ್ತಿರಾಯರ ಪ್ರಬಂಧ ವ್ಯಾಪ್ತಿ ಕಿರಿದು ಜೊತೆಗೆ ಮೂರ್ತಿರಾಯರ ಶಿಷ್ಟ ನಗರ ಪ್ರಜ್ಞೆ ಗೊರೂರರಷ್ಟು ಗ್ರಾಮೀಣ ಪರಿಸರವನ್ನು ತೀವ್ರವಾಗಿ ಪ್ರವೇಶ ಮಾಡುವುದಿಲ್ಲ.

**ಪ್ರಬಂಧಗಳಲ್ಲಿ ಹಾಸ್ಯ ಮತ್ತು ವಿಡಂಬನೆಗಳು**

ನಮ್ಮ ಸಾಹಿತ್ಯದಲ್ಲಿ ದಿನಕ್ಕೊಂದು ಹೊಸ ಹೊಸ ಸಾಹಿತ್ಯದ ಗಾಳಿ ಬೀಸಿ ಇದ್ದುದಲ್ಲವನ್ನು ಕೊಚ್ಚಿಕೊಂಡು ಹೋಗಬೇಕೆನುತ್ತಿರುವ ಈ ಕಾಲದಲ್ಲಿ ಗೊರೂರರು ಮತ್ತು ಎ.ಎನ್.ಮೂರ್ತಿರಾಯರು ಅವರ ಪ್ರಬಂಧಗಳಲ್ಲಿ ಹಾಸ್ಯ ಅತ್ಯಂತ ಪ್ರಿಯವಾಗಿ ಉಳಿದಿದೆ. ಹಾಸ್ಯವನ್ನು ವಿಶ್ಲೇಷಿಸುವುದು ಪ್ರಯಾಸದ ಮಾತು. ಜೀವನದ ಅನೇಕ ರಸಮಯ ವಿಚಾರಗಳನ್ನು ನಾವು ನೋಡಿ ಗ್ರಹಿಸಿ ಖುಷಿ ಪಡುತ್ತೇವೆ.

ಸುಖವನ್ನು ಅನುಭವಿಸುತ್ತೇವೆ. ಆದರೆ ಅವುಗಳನ್ನು ವಿಭಜಿಸಿ ವಿಶ್ಲೇಷಿಸಲು ಹೊರಟಾಗ ಮೂಕರಾಗುತ್ತವೆ. ಸಮಾಜದಲ್ಲಿನ ಓರೆ ಕೋರೆಗಳನ್ನು ಹಾಸ್ಯದ ಸನ್ನಿವೇಷದ ಮೂಲಕ ಸಮಾಜದಲ್ಲಿನ ವಾಸ್ತವ ಸ್ಥಿತಿಯನ್ನು ವಿಡಂಬನೆ ಮಾಡುತ್ತಿದ್ದಾರೆ.

ಗೊರೂರರ ಜಪ ತಪ ಅನುಷ್ಠಾನ ಮಲ್ಲಿಗೆ ಹಳ್ಳಿಯ ಬಯಲಾಟ, ಶ್ಯಾನುಭೋಗ, ಜಾತ್ರೆ ಪ್ರಬಂಧಗಳಲ್ಲಿ ಬರುವ ಹಾಸ್ಯದ ಸನ್ನಿವೇಶಗಳು, ಗೊರೂರರ ಮನೋಧರ್ಮವನ್ನು ಚಿತ್ರಿಸುತ್ತದೆ. ಜಪ ತಪ ಅನುಷ್ಠಾನ ಪ್ರಬಂಧದಲ್ಲಿ ಮನುಷ್ಯ ಸ್ವಭಾವದ ಅಂಕುಡೊಂಕುಗಳ ಮೇಲೆ ಭೂತಗನ್ನಡಿ ಹಿಡಿದು ಉತ್ಪ್ರೇಕ್ಷೆಯಿಂದಲೇ ಹಾಸ್ಯದ ಸನ್ನಿವೇಷವನ್ನು ನಿರ್ಮಾಣ ಮಾಡುತ್ತಾರೆ. ಹಾಗೂ ಸಮಾಜದಲ್ಲಿ ಸೋಮಾರಿತನದ ವಿರುದ್ದ ವಿಡಂಬನೆ ಕಂಡು ಬರುತ್ತದೆ.

ಮಲ್ಲಿಗೆ ಹಳ್ಳಿಯ ಬಯಲಾಟದಲ್ಲಿ ಪ್ರಬಂಧ ಉದ್ದಕ್ಕೂ ಹಾಸ್ಯದ ರಸ ಕಂಡು ಬರುತ್ತದೆ. ಪೌರಾಣಿಕ ವಸ್ತುವನ್ನು ಆಧಾರಿಸಿ ನಾಟಕ ಮಾಡುವಾಗ ಅದರಿಂದ ಉಂಟಾಗುವ ತೊಂದರೆಗಳು ಎಲ್ಲವೂ ಹಾಸ್ಯದ ಮಹಾ ಪೂರವನ್ನು ಹರಿಸುತ್ತದೆ. ಆದರೆ ಇದರ ಮೂಲವನ್ನು ಗೊರೂರು ತಮ್ಮ ನಾಗರೀಕತೆ ಬೆಳದಂತೆ ಆಗುವ ಅನಾವೂಹ ಮನುಷ್ಯರ ಕೈಯಿಂದ ನಡೆಯುವುದು. ಇದರಲ್ಲಿ ಮನುಷ್ಯನ ಸೋಮಾರಿತನದಿಂದ ಆಗುವ ವೈಚಿತ್ರಗಳನ್ನು ವಿಡಂಬನೆ ಮಾಡಿದ್ದಾರೆ.

ಮೂರ್ತಿರಾಯರ ಹೆಂಡತಿಯ ಹೆಸರು 'ಮಹಾರಾಜಾ ಕಾಲೇಜಿನ ಕಾಮನ್ ರೂಂ' ಮೂರ್ತಿರಾಯರ ಪ್ರಬಂಧಗಳಲ್ಲಿ ಪ್ರಬಂಧದ ನಿರೂಪಕನ ಪತ್ನಿ ಲಲಿತೆ ಪ್ರಬಂಧಗಳಲ್ಲಿ ಅಂತರ್ಗತವಾಗಿ ಪ್ರವಹಿಸುತ್ತಾ ಪ್ರಬಂಧಕ್ಕೆ ಮೆರಗು ನೀಡಿದ್ದಾರೆ. ಅವರ ಹೆಂಡತಿಯ ಹೆಸರು ಎಂಬ ಪ್ರಬಂಧವನ್ನು ಬರೆದರು ಇದರ ಪ್ರಭಾವ ಎಷ್ಟರ ಮಟ್ಟಿಗಾಯಿತೆಂದರೆ ಹೆಂಡತಿಯನ್ನು ಕುರಿತು ಲೇವಡಿ ವ್ಯಂಗ್ಯ ಹಾಸ್ಯ ವಿಡಂಬನೆಗಳಿಂದ ಕೂಡಿದ ಪ್ರಬಂಧಗಳ ಮಹಾ ಪೂರವೇ ಹರಿದು ಬಂದಿತು. ಮೂರ್ತಿರಾಯರ ನೆಂಟರು ಮತ್ತು ಬೇಡದ ಅತಿಥಿಗಳು ಪ್ರಬಂಧಗಳು ವ್ಯಂಗ್ಯ ವಿನೋಧದಿಂದ ಕೂಡಿವೆ.

ಗೊರೂರು ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳು ಹಾಸ್ಯದ ಪಂಕ್ತಿಯಲ್ಲಿದ್ದಾರೆ. ಹಾಸ್ಯದ ವರ ಪಡದವರಿಗೆ ಸುಲಭ, ವಿಡಂಬನೆಯ ಆಮಿಷವನ್ನು ಗೆಲ್ಲುವುದು ಕಷ್ಟ ಆದರೆ ಗೊರೂರು ಮತ್ತು ಮೂರ್ತಿರಾಯರು ಗೆದ್ದಿದ್ದಾರೆ. ಸಮಾಜದಲ್ಲಿ ದುಷ್ಟತನವನ್ನು ನೆನಪಿಸಿಕೊಂಡಾಗ ಎಂದಿಗೂ ಅದನ್ನು

ಕಡೆಗಣಿಸುವುದು ಸಾಧ್ಯವಿಲ್ಲ. ಆದರೆ ದುಷ್ಟತನವಿಲ್ಲದ ಕಡೆ ನೈತಿಕ ತೀರ್ಮಾನವನ್ನು ಮಾಡದೆ, ಮನುಷ್ಯ ಸ್ವಭಾವದ ವೈಚಿತ್ರದಲ್ಲಿಯೇ ಖುಷಿ ಪಡುವ ಬರಹಗಾರರು ನಮ್ಮಲ್ಲಿ ಕಡಿಮೆ.

ಸಮಾಜದ ಒಳಗಿನ ಸಮುದಾಯಗಳ ಪರಸ್ಪರ ಸಂಬಂಧ ಇಡೀ ಸಮಾಜದ ಮತ್ತು ಸಮುದಾಯಗಳ ಮೌಲ್ಯಗಳ ಪದ್ಧತಿಗಳ ಎಲ್ಲವನ್ನೂ ಮಾನವ ಬದುಕಿನ ಸಂದರ್ಭದಲ್ಲಿ ಹಾಸ್ಯ ಮತ್ತು ವಿಡಂಬನೆಯ ಮೂಲಕ ಗೊರೂರರು ಮತ್ತು ಮೂರ್ತಿರಾಯರ ಪ್ರಬಂಧ ಸಾಹಿತ್ಯ ಸಂಸ್ಕೃತಿ ಅಮೂಲ್ಯ ಗಣಿಯಾಗುತ್ತದೆ.

ಗೊರೂರು ಮತ್ತು ಮೂರ್ತಿರಾಯರ ಪ್ರಬಂಧಗಳಲ್ಲಿ ಮುಖ್ಯವಾಗಿ ಬರುವ ಒಂದು ಪ್ರಮುಖ ಚಿತ್ರಣವೆಂದರೆ, ಸಮಾಜದಲ್ಲಿನ ಮೂಡನಂಬಿಕೆಗಳ ವಿರುದ್ಧ ಅಂದರೆ ಆಚಾರ ವಿಚಾರಗಳು ಮಾನವನ ಅಭಿವೃದ್ಧಿಗೆ ತೊಂದರೆಯನ್ನುಂಟು ಮಾಡುವ ವಸ್ತು ಅವುಗಳ ವಿರುದ್ಧ ಪ್ರಬಂಧಕಾರರು ತಮ್ಮ ನಿಲುವುಗಳನ್ನು ಸ್ಪಷ್ಟಪಡಿಸುತ್ತಾರೆ.

ಗೊರೂರು ಮತ್ತು ಮೂರ್ತಿರಾಯರ ಮೂಲತ: ಹಾಸ್ಯ ಪ್ರಧಾನವಾಗಿರುವುದರಿಂದ ಅವರ ಪ್ರಬಂಧಗಳಲ್ಲಿ ಹಾಸ್ಯ ವಿನೋಧ ಪ್ರಸಂಗಗಳು ಹಲವು ಬಗೆಗಳಲ್ಲಿ ಮೈದೋರುವಯದು  ಸಹಜವೇ ಆಗಿವೆ. ಇಂಥ ಪ್ರಸಂಗಗಳು ಅವರ ಬರಹಗಳನ್ನು ಪ್ರಬಂಧಗಳಲ್ಲಿ ಆಕರ್ಷಿಣಿಯ ಅಂಶಗಳಲ್ಲಿ ಇದೂ ಒಂದು .ಹಾಸ್ಯ ವಿನೋಧ ವ್ಯಂಗ್ಯ ವಿಡಂಬನೆ ಮೊದಲಾದುವುಗಳು ಹಲವು ರೂಪಗಳನ್ನು ಪಡೆಯಬಹುದು.

'ನಮ್ಮ ಊರು ರಥೋತ್ಸವದ ಕಾಲದಲ್ಲಿ ಬ್ರಾಹ್ಮಣೋತ್ತಮರು, ಊಟ ಮಾಡಿ ಹೊಟ್ಟೆ ಬಿಟ್ಟುಕೊಂಡು ನಿಂತಿರುವುದನ್ನು ನೋಡಿ ಗೌಡರಲ್ಲಿ "ಅಯ್ಯಾಳ್ಗೆ ಊಟ ಅಂದರೆ ತೀರಿತು ಯಾವೆಲಾದ್ರೂ ಹೋಗ್ಲಿ. ಹೊಟ್ಟೆ ತಿಂದು ತಿಂದು ಕಂಚಿನಂತೆ ಕಣಿಗುಟುತ್ತಿದೆ' ಎಂದು ಹಾಸ್ಯ ಮಾಡುತ್ತಾರೆ.

'ಹರಕೆಗಳು' ಎಂಬ ಪ್ರಬಂಧದಲ್ಲಿ ಮೂರ್ತಿರಾಯರ ಸಾಮಾಜಿಕ ಚಿಂತನೆ ಇದೆ. ಆದರೆ ಕಟು ಟೀಕೆ ಇಲ್ಲ, ವ್ಯಂಗ್ಯ ವಿಡಂಬನೆಗಳಿಂದ ಅವರು ಸಾಮಾಜಿಕ ಮೌಢ್ಯಗಳಲ್ಲಿ ಒಂದಾದ ಹರಕೆ ಹೊರುವ ದೌರ್ಬಲ್ಯಗಳನ್ನು ಅವರಿಗೆ ಸಹಜವಾದ ಹಾಸ್ಯ ಶೈಲಿಯಲ್ಲಿ ಲೇವಡಿ ಮಾಡುತ್ತಾರೆ.

ದೇವರನ್ನು ಒಲಿಸಿಕೊಂಡು ನಮ್ಮ ಇಷ್ಟಾರ್ಥಗಳನ್ನು ಸಾಧಿಸಬೇಕಾದರೆ ನಾವು ಅವನ ಮಟಕ್ಕೆ ಏರಬೇಕು. ಇಲ್ಲವೇ ಅವನನ್ನು ನಮ್ಮ ಮಟ್ಟಕ್ಕೆ ಇಳಿಸಿಕೊಳ್ಳಿಬೇಕು. ಎಂದು ಹರಕೆಗಳ ಮೂಲವನ್ನು ಹುಡುಕುತ್ತಾರೆ. ಅಂತೆಯೇ, ಶುದ್ಧ ಸಂದೇಹ ವಾದಿಗಳಾದ ನನ್ನ ಮಿತ್ರರೊಬ್ಬರು ಹೊಸ ಬಟ್ಟೆಗಳಿಗೆ ಅರಿಸಿನ ಹಚ್ಚದೆ ಧರಿಸುವುದಿಲ್ಲ. ಆದರೆ ಅರಿಸಿನ ಬೇಕೆಂದು ಕೇಳಿದರೆ ಹೆಂಡತಿ ಹಾಸ್ಯ ಮಾಡಿಯಾಳೆಂಬ ಭಯದಿಂದ ಸರಸದ ನೆಪ ಮಾಡಿಕೊಂಡು ಬಟ್ಟೆಗಳನ್ನು ಆಕೆಯ ಕೆನ್ನಗೆ ಸೋಕಿಸಿ ಧರಿಸುತ್ತಾರೆ. ಎಂದು ತಮ್ಮ ಸಹಜ ಪ್ರವೃತ್ತಿಯಲ್ಲಿ ಹಾಸ್ಯ ಮಾಡುತ್ತಾರೆ.

ಗೊರೂರು ಸಾಂಪ್ರಾದಾಯಿಕ ಹಿನ್ನೆಲೆಯಲ್ಲಿ ಬೆಳೆದು ಬಂದವರು. ಅವರು ದೇವರು ಮತ್ತು ಆಚಾರ ವಿಚಾರಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿದವರು. ಮೂರ್ತಿರಾಯರು ದೇವರ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ತೋರಿಸುವುದಿಲ್ಲ. ದೇವರು ಎಂಬ ವಿಚಾರಕ್ಕೆ ಈ ಇಬ್ಬರು ಪ್ರಬಂಧಕಾರರಲ್ಲಿ ಪರ ಮತ್ತು ವಿರೋಧವನ್ನು ಕಾಣಬಹುದು.

ಗೊರೂರಿಗೆ ಪರಾಮಾರ್ಥಕವಾದುದು ಮಾನವೀಯತೆವಾದುದು ಹಾಗೂ ಧಾರ್ಮಿಕವಾದುದು, ದೇವರಾಗುತ್ತದೆ. ಮೂರ್ತಿರಾಯರಿಗೆ ಮೌಲ್ಯಾತ್ಮಕವಾದುದು, ಕಲಾತ್ಮಕವಾದುದು ದೇವಾರಾಗುತ್ತದೆ. ಅವರ ಸಹಜ ಸ್ವಭಾವಕ್ಕೆ ಪುರಾಣ ಕಾವ್ಯದಿಂದ ಅವರ ಮನಸ್ಸಿಗೆ ದೇವರು ಹೇಗೆ ಕಾಣಿಸುತ್ತಾನೆ. ಹಾಗೆಯೇ ವಿವರಿಸಿದ್ದಾರೆ. ಗೊರೂರು 'ಜಾತ್ರೆ' ಪ್ರಬಂಧ ಹಾಗೂ ಮೂರ್ತಿರಾಯರಲ್ಲಿ ಬರುವ ಹರಕೆಗಳು ಮತ್ತು ಪ್ರಯಾಣ ಯಾತ್ರೆ ಪ್ರಬಂಧಗಳಲ್ಲಿ ಕಾಣಬಹುದು. ಅಲ್ಲಿನ ವೈದಿಕ ಬ್ರಾಹ್ಮಣರು ಮಾಡುವ ಶೋಷಣೆಯನ್ನು ಕುರಿತು ಅವರು ಹೀಗೆ ವಿವರಿಸಿದ್ದಾರೆ.

ಇಲ್ಲಿ ವೈದಿಕರು ಯಾವುದನ್ನು ಶಾಸ್ತ್ರ ಸಮ್ಮತವೆಂದರೂ, ವಾಸ್ತವವಾಗಿ ಆಲೋಚಿಸಿದರೆ ಅವೂ ಮೂಡನಂಬಿಕೆಗಳ, ಎಲ್ಲ ಜನಾಂಗದವರಲ್ಲೂ ಅವರ ಸಂಪ್ರದಾಯವನ್ನು ಬಹುದಾದ ಬದುಕಿನ ರೀತಿ ನೀತಿ ಅನುಗುಣವಾಗಿ ಬೇರು ಬಿಟ್ಟಿದ್ದ ಇವು ಸಾಮಾಜಿಕ ಮತ್ತು ನೈತಿಕ ಏರುಪೇರುಗಳಿಗೆ ಆರ್ಥಿಕ ಅಸಮಾನತೆಗೆ ಕಾರಣಗಳಾಗುತ್ತವೆ. ಇವುಗಳ ನಿರ್ಮೂಲನ ಸಾಹಿತ್ಯಗಳ ಆದ್ಯ ಕರ್ತವ್ಯ.

ನಮ್ಮ ದೇವಸ್ಥಾನದ ಇಲಿಗಳು, ಕ್ರೈಸ್ತ ದೇವಾಲಯಗಳ ಇಲಿಗಳಷ್ಟೆ ಬಡಕಲುಗಳಾಗಿಲ್ಲ. ಅವೂ ಅಲ್ಲಿ ಸಮಾರಾಧನೆ ಹುಳಿಹಣ್ಣುಗಳನ್ನು ಹೊಡೆದು ಹೆಗ್ಗಣಗಳಿಗಿಂತ ಬಲವಾಗಿವೆ. ಎನ್ನವಲ್ಲಿಯೂ

ಶಕ್ತಿಪೂರ್ಣವಾದ ವಿಡಂಬನೆಯನ್ನು ಗಮನಿಸಬಹುದು. ವಾಸ್ತವವಾಗಿ ಇಲ್ಲಿಯ ವಿಡಂಬನೆ ಕ್ರಿಸ್ತರ ದೇವಾಲಯಗಳ ಇಲಿಗಳನ್ನು ಕುರಿತದ್ದಲ್ಲ. ನಮ್ಮ ದೇವಾಲಯಗಳು ದುಸ್ಥಿತಿಯನ್ನು ಕುರಿತದ್ದು.

ಗೊರೂರು ಮತ್ತು ಮೂರ್ತಿರಾಯರ ವಿಡಂಬನೆ ಮತ್ತು ಹಾಸ್ಯದಲ್ಲಿ ಬರುವ ರಸಮಯ ಘಟನೆಗಳಿಗೆ ಹಾಸ್ಯೋಕ್ತಿಗಳಿಗೆ ವರ್ಣನೆಗಳಿಗೆ, ವ್ಯಕ್ತಿ ಚಿತ್ರಗಳಿಗೆ ಲೆಕ್ಕವಿಲ್ಲ, ಅಸಂಬದ್ಧವಾದ ಆದರೆ ಸಹಜವಾದ ಲಘು ಕಲ್ಪನೆ ಸನ್ನಿವೇಶದಿಂದಲೇ ಅವರು ಹೇಗೆ ಸರಳ ಹಾಸ್ಯವನ್ನು ಸೃಷ್ಟಿಸಬಲ್ಲರು ಎಂಬುದನ್ನು ಪ್ರಬಂಧಕಾರರು ತೋರಿಸಿರುತ್ತಾರೆ. ಗೊರೂರು ಮತ್ತು ಮೂರ್ತಿರಾಯರ ಪ್ರಬಂಧಗಳು ವ್ಯಷ್ಟಿಯ ಮೂಲಕ ಸಮಷ್ಟಿಯ ಸಮಸ್ಯೆಯನ್ನು ಚಿತ್ರಿಸಲು ಇಷ್ಟಪಡುತ್ತಾರೆ. ಲೋಕದ ಡೊಂಕನ್ನು ತಿದ್ದಬೇಕೆಂಬ ಚಟ ಹೊಸದೃಷ್ಟಿಯನ್ನು ಮೂಡಿಸಬೇಕು. ಹಾಗೂ ಹೊಸ ತತ್ವಗಳನ್ನು ಹರಡಬೇಕೆಂಬುದು ಗೊರೂರರ ಮತ್ತು ಮೂರ್ತಿರಾಯರ ಪ್ರಬಂಧಗಳಲ್ಲಿ ಕಂಡು ಬರುವ ವೈಚಾರಿಕ ವಿಚಾರವಾಗಿದೆ.

ಒಟ್ಟಾರೆಯಾಗಿ ಹೇಳುವುದರೆ ಗೊರೂರು ಮತ್ತು ಮೂರ್ತಿರಾಯರ ಸಮಾಜದಲ್ಲಿ ಮೂಡಿ ಬಂದಿರುವ ಸಾಹಿತ್ಯವೂ ಆಯಾ ಸಮಾಜಕ್ಕೆ ನೀಡುವ ಕೊಡುಗೆಗಳಲ್ಲಿ ಬಂದವೆಂದು ಗುರುತಿಸಬಹುದಾಗಿದೆ. ಯಾವುದೆ. ಅಂದಿನ ಸಮಾಜದಲ್ಲಿನ ಸಮಕಾಲೀನ ವಸ್ತು ಸ್ಥಿತಿಯನ್ನು ಹೇಳುತ್ತಾ ಅದನ್ನು ಬಂದು ಸುಂದರ ಕಲಾಕೃತಿಯಾಗಿ ಸಾಹಿತ್ಯಕ್ಕೆ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತಾನೆ. ಸಾಧ್ಯವಾದರೆ ಸಮಾಜದ ಯಾವುದೇ ಒಂದು ಸಮಸ್ಯೆಗೆ ಪರಿಹಾರವನ್ನು ತನ್ನ ಸ್ವಂತ ತಿಳುವಳಿಕೆಯ ಮೇಲೆ ಲೇಖಕರು ಸೂಚಿಸಲು ಬಹುದು ಇದರಿಂದ ಕೃತಿಗೆ ಯಾವುದೇ ಭಂಗ ಬರುವುದಿಲ್ಲ.

ಗೊರೂರು ಮತ್ತು ಮೂರ್ತಿರಾಯರ ತಮ್ಮ ಪ್ರಬಂಧಗಳಲ್ಲಿ ಅಂದಿನ ಕಾಲದ ಸಾಮಾಜಿಕ ಪರಿಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ನಮ್ಮ ಮುಂದೆ ತೆರೆದಿಟ್ಟದ್ದಾರೆ. ಅವರ ಅಭಿವ್ಯಕ್ತಿಸುವ ರೀತಿಯಲ್ಲಿ ವ್ಯತ್ಯಾಸಗಳು ಕಂಡು ಬಂದರೂ ಕೂಡ ಸಮಾಜವನ್ನು ನೋಡಿರುವ ದೃಷ್ಟಿಕೋನವೂ ಒಂದೇಯಾಗಿದೆ.

ಗೊರೂರು ಮತ್ತು ಮೂರ್ತಿರಾಯರು ನಮ್ಮ ಸಮಾಜದ ಜನರ ಲೋಪದೋಷಗಳನ್ನು ಸಹಾನುಭೂತಿಯಿಂದ ಕಂಡು ಕನಿಕರಿಸಿ ವಿಡಂಬನೆಯಿಂದ ಟೀಕಿಸಿ ಎಲ್ಲಕ್ಕೂ ಮಿಗಿಲಾಗಿ ಯಾರಿಗೂ ನೋವಾಗದಂತೆ ಎಲ್ಲರೂ ನಲಿಯವಂತೆ ತಮ್ಮ ಪ್ರಬಂಧಗಳ ಮೇಲೆ ಹಾಸ್ಯದ ಪನ್ನಿರನ್ನು ಚಿಮುಕಿಸಿದ್ದರೆ ಬದುಕನ್ನು ಸಹ್ಯವನ್ನಾಗಿ ಮಾಡಿ ಅದರ ವಿಷಯದಲ್ಲಿ ಗೌರವವನ್ನು ಮೂಡುವಂತೆ ಮಾಡಿ ಕನ್ನಡ ವಾಚಕ ಕೋಟಿ ಹೃದಯವನ್ನು ಗೆದ್ದುಕೊಂಡಿದ್ದಾರೆ.

# ಅಧ್ಯಾಯ - ೭

## ಉಪ ಸಂಹಾರ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಬಂಧ ಪ್ರಕಾರಕ್ಕೆ ವಿಶಿಷ್ಟ ಸ್ಥಾನವಿದೆ ಕನ್ನಡದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಎಲ್ಲ ಪ್ರಕಾರಗಳ ಲೇಖಕರಿಂದ ಅಭಿವ್ಯಕ್ತವಾಗಿದೆ. ಕಾಲದಿಂದ ಕಾಲಕ್ಕೆ ವಸ್ತು ವೈವಿಧ್ಯತೆಯನ್ನು ತನ್ನೊಳಗೆ ಸೇರಿಸಿಕೊಂಡು ಪ್ರಬಂಧ ಪ್ರಕಾರವೂ ತನ್ನದೇ ಆದ ಶೈಲಿ, ನಿರೂಪಣೆಗಳನ್ನು ಪರಿಣಾಮಕಾರಿಯಾಗಿ ನಿರೂಪಿಸಿದೆ.

ಆಧುನಿಕ ಸಾಹಿತ್ಯದ ಪ್ರಬಂಧ ಲೇಖಕರಲ್ಲಿ ಪ್ರಮುಖವೆನಿಸಿರುವ ಗೊರೂರು ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳನ್ನು ಪ್ರಸ್ತುತ ನಿಬಂಧದ ಅಧ್ಯಯನಕ್ಕೆ ಒಳಪಡಿಸಿದ್ದು, ವಿವರಣಾತ್ಮಕವಾಗಿ ವಿಶ್ಲೇಷಣಾತ್ಮಕವಾಗಿ ಹಾಗೂ ತೌಲನಿಕವಾಗಿ ಅಧ್ಯಯನವನ್ನು ಮಾಡಿದು ಅದರ ಒಟ್ಟು ಫಲಿತಾಂಶಗಳನ್ನು ಮುಂದಿನಂತೆ ವಿವರಿಸಲಾಗಿದೆ. ಅದರ ಒಟ್ಟು ರೂಪವೇ ಪ್ರಸ್ತುತ ನಿಬಂಧ "ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಎ.ಎನ್.ಮೂರ್ತಿರಾವ್ ಪ್ರಬಂಧಗಳು ತೌಲನಿಕ ಅಧ್ಯಯನ" ಎಂಬ ಶೀರ್ಷಿಕೆಯನ್ನು ಒಳಗೊಂಡಿದೆ. ಮೊದಲೇ ಹೇಳಿರುವ ಉದ್ದೇಶದಂತೆ ಗೊರೂರು ಮತ್ತು ಮೂರ್ತಿರಾಯರ ಪ್ರಬಂಧಗಳಲ್ಲಿ ಕಂಡು ಬರುವ ಸಮಾಜದ ಸಂವೇದನೆ, ಸಮಾಜಿಕ ಪ್ರಜ್ಞೆ ಗ್ರಾಮೀಣ ಚಿತ್ರಣ, ಹಾಸ್ಯ ಮತ್ತು ವಿಡಂಬನಾತ್ಮಕ ಸನ್ನಿವೇಶಗಳು ಮೊದಲಾದ ಅಂಶಗಳನ್ನು ತೌಲನಿಕವಾಗಿ ನೋಡಲಾಗಿದೆ.

ಪ್ರಬಂಧ ಸಾಹಿತ್ಯದ ಸ್ವರೂಪವೇನು? ಪ್ರಬಂಧ ಸಾಹಿತ್ಯ ವಸ್ತು ಯಾವುದು? ಸಾಹಿತ್ಯ ಮೂಲಕ ಗೊರೂರರು ಮತ್ತು ಮೂರ್ತಿರಾಯ ಪ್ರಬಂಧಗಳಲ್ಲಿ ಕಂಡು ಬಂದಿರುವ ಸಮಾಜದ ಬದುಕಿನ ಚಿತ್ರಣ ಮತ್ತು ಲೇಖಕರ ಬದುಕು ಬರಹ ಹಾಗೂ ಆ ಲೇಖಕರ ಪ್ರಬಂಧಗಳನ್ನು ಆಧಾರವಾಗಿಟ್ಟುಕೊಂಡು ನಾನಾ ಆಯಾಮಗಳಲ್ಲಿ ಅಧ್ಯಯನ ನಡೆಸಲಾಗಿದೆ.

ಈ ಅಧ್ಯಯನಕ್ಕೆ ಇಬ್ಬರು ಪ್ರಬಂಧಕಾರ ಲಲಿತ ಪ್ರಬಂಧಗಳನ್ನು ಅವರ ಸಂಕಲನಗಳನ್ನು ಆಯ್ಕೆ ಮಾಡಿಕೊಂಡು ವಿಷಯಕ್ಕೆ ವಿಶ್ಲೇಷಿಸಿರುವ ಪ್ರಯತ್ನದ ಜೊತೆಗೆ ಅನುಕೂಲವಾಗುವಂತೆ ಹಲವಾರು ವಿಷಯಗಳನು ವಿಭಾಗಿಸಿಕೊಂಡು ಈ ನಿಬಂಧ ರಚಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಶೀರ್ಷಿಕೆ ಹೇಳುವಂತೆ ಈ ಅಧ್ಯಯನವನ್ನು ಮಾಡಲು ಹೊಂದಿರುವ ಉದ್ದೇಶ ಮತ್ತು ವ್ಯಾಪ್ತಿಯನ್ನು ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಬಂಧ ಸಾಹಿತ್ಯದ ಸ್ವರೂಪವನ್ನು ಕುರಿತು ಹಲವು ಪ್ರಬಂಧಕಾರರ ಹೆಸರು ಹಿನ್ನಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಗೊರೂರು ಮತ್ತು ಮೂರ್ತಿರಾವ್ ರವರ ಬದುಕು ಮತ್ತು ಬರಹದ ಜೊತೆಗೆ ಅವರಿಗೆ ಬಂದಿರುವ ಗೌರವ ಸ್ಥಾನಮಾನಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ರವರ ಪ್ರಬಂಧ ಸಾಹಿತ್ಯದ ಸ್ವರೂಪ ಬಗ್ಗೆ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಎ.ಎನ್.ಮೂರ್ತಿರಾವ್ ಪ್ರಬಂಧ ಸಾಹಿತ್ಯದ ಸ್ವರೂಪವನ್ನು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಗೊರೂರರು ಮತ್ತು ಎ.ಎನ್.ಮೂರ್ತಿರಾವ್ ರವರ ಪ್ರಬಂಧ ಸಾಹಿತ್ಯದ ತೌಲನಿಕ ಅಧ್ಯಯನದಲ್ಲಿ ಮೂರು ವಿಭಾಗಗಳನ್ನು ಮಾಡಲಾಗಿದೆ. ಮೊದಲನೇ ವಿಭಾಗದಲ್ಲಿ ಗೊರೂರರು ಮತ್ತು ಮೂರ್ತಿರಾಯರ ಪ್ರಬಂಧಗಳ ಹಿನ್ನಲೆಯಲ್ಲಿ ಸಾಮಾಜಿಕ ಪ್ರಜ್ಞೆತೆಯನ್ನು ನೋಡಲಾಗಿದೆ. ಎರಡನೇಯ ಭಾಗದಲ್ಲಿ ಗ್ರಾಮೀಣ ಪರಿಸರ ಚಿತ್ರಣವನ್ನು ಇಬ್ಬರು ಲೇಖಕರು ಪ್ರಬಂಧಗಳ ಮೂಲಕ ವಿಶ್ಲೇಷಿಸಲಾಗಿದೆ. ಮೂರನೇಯ ಭಾಗದಲ್ಲಿ ಹಾಸ್ಯ ಮತ್ತು ವಿಡಂಬನಾತ್ಮಕ ಸನ್ನಿವೇಶಗಳನ್ನು ಪ್ರಬಂಧಗಳಲ್ಲಿ ಗುರುತಿಸುವ ಅವರ ನಿಲುವುಗಳನ್ನು ಚರ್ಚಿಸಲಾಗಿದೆ. ಈ ಹಿನ್ನಲೆಯಲ್ಲಿ ಇವರಿಬ್ಬರಲ್ಲಿ ಕಂಡು ಬರುವ ಹೋಲಿಕೆ ಮತ್ತು ವ್ಯತ್ಯಾಸ ಅಥವಾ ಸಾದೃಶ್ಯ ಮತ್ತು ವೈದೃಶ್ಯಗಳನ್ನು ಚರ್ಚಿಸಲಾಗಿದೆ.

ಈ ಅಧ್ಯಾಯದಲ್ಲಿ ನಿಬಂಧದ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಒಟ್ಟಾರೆಯಾಗಿ ಈ ಅಧ್ಯಯದಲ್ಲಿ ಮುಖ್ಯ ಶೀರ್ಷಿಕೆಯಡಿಯಲ್ಲಿ ಮಾಡಬಹುದಾದಂತಹ ಇಡೀ ನಿಬಂಧದ ಸ್ವರೂಪ ವಿವರಣೆಯನ್ನು ಪಕ್ಷಿನೋಟವಾಗಿ ಈ ಅಧ್ಯಾಯ ಕಂಡು ಬರುತ್ತದೆ.

ಏಳನೆಯ ಅಧ್ಯಾಯವಾಗಿ ಉಪಸಂಹಾರದಲ್ಲಿ ಮಾಡಿರುವ ಕಾರ್ಯವನ್ನು ಸಂಕ್ಷೀಪ್ತವಾಗಿ ಹೇಳಲಾಗಿದೆ. ಕೊನೆಯಲ್ಲಿ ಈ ಅಧ್ಯಯನಕ್ಕೆ ಸಹಕಾರಿಯಾದ ಗ್ರಂಥಗಳ ಬಗೆಗಿನ ವಿವರಗಳನ್ನು ನೀಡಲಾಗಿದೆ.

# ಗ್ರಂಥಋಣ

೧. ಶತಮಾನದ ಲಲಿತ ಪ್ರಬಂಧಗಳು : ಪ್ರಥಮ ಮುದ್ರಣ ೨೦೦೧
ಸಂಪಾದಕರು: ಗುರುಲಿಂಗ ಕಾಪಸೆ

೨. ಗೊರೂರು ರಾಮಸ್ವಾಮಿ ಅಯ್ಯಂಗಾರ್ : ಪ್ರಥಮ ಮುದ್ರಣ ೨೦೦೬
ನವ ಕರ್ನಾಟಕ ಪಬ್ಲಿಕೇಶನ್ ಪ್ರೈವೆಟ್ ಲಿಮಿಟೆಡ್
ಪ್ರಧಾನ ಗುರುದತ್ತ
ಬೆಂಗಳೂರು ೫೬೦೦೦೧

೩. ಎ.ಎನ್.ಮೂರ್ತಿರಾವ್ : ಪ್ರಥಮ ಮುದ್ರಣ ೨೦೦೧
ನವ ಕರ್ನಾಟಕ ಪಬ್ಲಿಕೇಶನ್ ಪ್ರೈವೆಟ್ ಲಿಮಿಟೆಡ್
ಡಾ॥ ಶಾಂತರಾಮ ಪ್ರಭು
ಬೆಂಗಳೂರು ೫೬೦೦೦೧

೪. ಪ್ರಬುದ್ಧ ಕರ್ನಾಟಕ : ಪ್ರಥಮ ಮುದ್ರಣ ೧೯೬೯
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

೫. ಹಳೆಯಪಳೆಯ ಮುಖಗಳು : ಪ್ರಥಮ ಮುದ್ರಣ ೧೯೮೦
ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್

೬. ಬೆಟ್ಟದ ಮನೆಯಲ್ಲಿ ಮತ್ತು ಇತರ ಪ್ರಬಂಧಗಳು: ಪ್ರಥಮ ಮುದ್ರಣ ೧೯೭೨
ಗೊರೂರು ರಾಮಸ್ವಾಮಿ ಅಯ್ಯಂಗಾರ್

ಹೇಮಾವತಿ ಪ್ರಕಾಶನ ಗೊರೂರು

೮. ಹೇಮಾವತಿ ಮತ್ತು ಇತರ ಪ್ರಬಂಧಗಳು : ಪ್ರಥಮ ಮುದ್ರಣ ೧೯೬೩
ಶ್ರೀ ಲಕ್ಷ್ಮಿಬುಕ್ ಹೌಸ್ ಮೈಸೂರು

೯. ಸಮಗ್ರ ಲಲಿತ ಪ್ರಬಂಧಗಳು : ಪ್ರಥಮ ಮುದ್ರಣ ೧೯೮೮
ಎ.ಎನ್.ಮೂರ್ತಿರಾವ್
ಕನ್ನಡ ಸಂಘ
ಕ್ರೈಸ್ಟ್ ಕಾಲೇಜ್ ಬೆಂಗಳೂರು.

೧೦. ಶತಾಯುಷಿ : ಪ್ರಥಮ ಮುದ್ರಣ ೨೦೦೦
ಪ್ರೊ.ಎ.ಎನ್.ಮೂರ್ತಿರಾವ್
ಅಭಿನಂದನಾ ಗ್ರಂಥ.

೧೧. ಸಾಹಿತ್ಯ ವಿಮರ್ಶೆ : ಪ್ರಥಮ ಮುದ್ರಣ ೨೦೦೬
ಸಂಪಾದಕ
ಡಾ.ಜಿ.ಪ್ರಶಾಂತ್ ನಾಯಕ್

೧೨. ಸಂಭಾವನ :
ಸಂಪಾದನೆ, ಕನ್ನಡ ಸಾಹಿತ್ಯ ಪರಿಷತ್
ಬೆಂಗಳೂರು.

೧೩. ಕನ್ನಡ ಸಾಹಿತ್ಯ ಕೋಶ : ಪ್ರಥಮ ಮುದ್ರಣ ೨೦೦೩
ಸಂಪಾದಕ
ರಾಜಪ್ಪ ದಳವಾಯಿ.

೧೪. ಗೊರೂರು ರಾಮಸ್ವಾಮಿ ಅಯ್ಯಂಗಾರ್ : ಪ್ರಥಮ ಮುದ್ರಣ ೨೦೦೧
ಲೇಖಕರು
ಸಿ.ಜಿ.ವೆಂಕಟಯ್ಯ

೧೫. ಕನ್ನಡ ವಿಷಯ ವಿಶ್ವಕೋಶ :
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು.

ದಿನಪತ್ರಿಕೆಗಳು

೧. ಪ್ರಜಾವಾಣಿ, ಸಾಪ್ತಾಹಿಕ ಪುರವಾಣಿ

೨. ತರಂಗ

೩. ಕನ್ನಡ ಪ್ರಭ

೪. ಸಂಯುಕ್ತ ಕರ್ನಾಟಕ

೫. ಕಸ್ತೂರಿ.

೬. ಆಂದೋಲನ

# ಅನುಬಂಧ

**ಗೊರೂರು ರಾಮಸ್ವಾಮಿ ಅಯ್ಯಂಗಾರ್ ಲಲಿತ ಪ್ರಬಂಧಗಳು**

**ಬೆಟ್ಟದ ಮನೆಯಲ್ಲಿ ಮತ್ತು ಇತರ ಪ್ರಬಂಧಗಳು**

೧. ಬೆಟ್ಟದ ಮನೆಯಲ್ಲಿ

೨. ಜನಪದ ಜೀವನಕ್ಕೆ ದೀಪಾವಳಿಯ ಸ್ಫೂರ್ತಿ

೩. ಕನ್ನಡ ಮೌಲ್ವಿ

೪. ಸಫಲ ಜೀವನ

೫. ಮಲ್ಲಗಳ್ಳಿಯ ಬಯಲಾಟ

೬. ಜಪ ತಪ ಅನುಷ್ಠಾನ

೭. ಸಂಚಾರಿ ಚಲನ ಚಿತ್ರಗಳು

೮. ಪೋಟ್ ಲಾಯರಿ

**ಹೇಮಾವತಿ ಮತ್ತು ಇತರ ಪ್ರಬಂಧಗಳು**

೧. ಹೇಮಾವತಿ ತೀರದಲ್ಲಿ

೨. ಬಿಂದಿಗಮ್ಮನ ಜಾತ್ರೆ

೩. ನಮ್ಮ ಎಮ್ಮೆಗೆ ಮಾತು ತಿಳಿಯುವುದು

೪. ಸಂಚಾರಿ ಚಲನಚಿತ್ರಗಳು

೬. ಒಂದು ಸಂಜೆ

೭. ಆಚಾರ ಕೆಟ್ಟರೂ ಆಕಾರ ಕೆಡಬಾರದು

೮. ಜಾತ್ರೆ

**ಹಳೆಯ ಪಳೆಯ ಮುಖಗಳು**

೧. ಶ್ಯಾನುಭೋಗ

೨. ಗಾಂಪರೊಡೆಯರ ಜೈನ ಯಾತ್ರೆ

೩. ದ್ಯೂತ ಪ್ರಸಂಗ

೪. ಅಂತರಾಷ್ಟ್ರೀಯ ಮಹಿಳಾ ವರ್ಷ

೫. ಒಂದು ಆದಿವಾಸಿಗಳ ಜನಪದ ಸಂಸ್ಕೃತಿ

೬. ಬಾಬಾ ಪ್ರಭಾವ

೭. ಗಾಂಧೀಜಿ ಸನ್ನಿಧಾನದಲ್ಲಿ ವಿನೋದ ನಿಮಿಷಗಳು

೮. ಸಂಚಾರಿ ಚಲನಚಿತ್ರಗಳು

೯. ಒಂದು ಸಂಜೆ

೧೦. ವಿರೋಧಭ್ಯಾಸ

೧೧ ಯುಗಾದಿ

೧೨ ಕ್ಷೌರ ಸಂಹಿತೆ

೧೩ ಐವತ್ತು ವರುಷಗಳ ಹಿಂದೆ ನೋಡಿದ ನಾಟಕಗಳು

೧೪ ಸರಸೋಕ್ತಿಗಳು

೧೫ ದಿ ವಿಲೇಜ್ ಪೋಸ್ಟ್‌ಮ್ಯಾನ್

**ಎ.ಎನ್. ಮೂರ್ತಿರಾಯರ ಪ್ರಬಂಧಗಳು**

**ಹಗಲುಗನಸುಗಳು**

೧. ಗೌರಜ್ಜಿ

೨. ಹಗಲುಗನಸುಗಳು

೩. ಹೂವುಗಳು

೪. ಗಾಡಿಯ ಪ್ರಯಾಣ

೫. ಕುರುಡ

೬. ಲಲಿತೆಯ ವಿದ್ಯಾಭ್ಯಾಸ

೭. ಪ್ರಣಯ ಯಾತ್ರೆ

**ಅಲೆಯುವ ಮನ**

೧. ಕನ್ನಿಂಗ್ಹ್ಯಾಮ್ ಪಾರ್ಕ

೨. ಹೋಟಲುಗಳು

೩. ಹೆಂಡತಿಯ ಹೆಸರು

೪. ದಿವಾನಖಾನೆಯ ಅಂದಚಂದ

೫. ಹರಕೆಗಳು

೬. ಕ್ಲೇಷಾ ಪ್ರವೀಣರ ಸಾಕ್ಷ್ಯ

೭. ವ್ಯಾಘ್ರಗೀತೆ

೮. ಕಾರ್ ರಿಪೇರಿ, ನೀನೇ ಮಾಡಿನೋಡು

೯. ಮಹಾರಾಜ ಕಾಲೇಜಿನ ಕಾಮನ್ ರೂಂ

೧೦. ಟೆಲಿಫೋನ್

೧೧. ಸಾಹಿತಿಯ ಚಹರೆ

೧೨. ಸಣ್ಣಕಥೆಯ ಹಾವಳಿ

೧೩. ನಿಲ್ಲವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು

೧೪. ಅಕ್ಕಿ ಹೆಬ್ಬಾಳು

**ಮಿನುಗು ಮಿಂಚು**

೧. ಹರಟೆಯ ಮಲ್ಲ

೨. ಹರಟೆ ಮತ್ತು ಪ್ರಬಂಧ

೩. ದೆವ್ವಗಳನ್ನು ಕುರಿತು.

೪. ಗೊಣಗುವ ಚಟ

೫. ಬೇಡದ ಅತಿಥಿಗಳು

೬. ಬೆಂಗಳೂರು

೭. ಗಾಂಪರೊಡೆಯರ ಸಂಘ ವಿಧಾನ ಸಭೆಯಲ್ಲಿ

೯. ವಿಶ್ವೇಶ್ವರಯ್ಯ ವ್ಯಕ್ತಿ ಮತ್ತು ಐತಿಹ್ಯ

೧೦. ಗಾನ ಪ್ರಪಂಚದ ಅಪೂರ್ಣ ಪ್ರಜ್ಞರು

೧೧. ಸಂಸ್ಕೃತಿ ಮತ್ತು ಸಾಹಿತ್ಯ

೧೨. ರೇಡಿಯಾ ನಾಟಕ ಮತ್ತು ರಂಗಭೂಮಿ

೧೩. ತೆರೆದ ಮನ

೧೪. ನೀಳಕಂಠ.

